# ಪರಿಸರ

ಆಗಸ್ಟ್ : 2001

ತಿಂಗಳ ಪತ್ರಿಕೆ



ಹಿರೋಶಿಮಾ ಶಾಂತಿ ಸ್ಮಾರಕ

- ಸೂಪರ್‌ಪವರ್ ಅಮೆರಿಕ ದೇಶಕ್ಕೆ ಎನ್.ಎಂ.ಡಿ. ಎಂಬ ಹೈಟೆಕ್ ರಕ್ಷಾಕವಚ
- ದನಿ ಎತ್ತಿದ ಪೆಸಿಫಿಕ್ ಮಹಿಳೆಯರು
- ಹಿರೋಶಿಮಾ, ನಾಗಸಾಕಿ ಮರುಕಳಿಸದಿರಲಿ
- ಹೀಗೊಬ್ಬ ಸಂತ !
- ನಾನು ಅಣುಬಾಂಬ್

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 20 ಸಂಚಿಕೆ : 8

ಆಗಸ್ಟ್ : 2001





ವಿಳಾಸ
"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067
ಇ-ಮೈಲ್ : manasapathrike@yahoo.co.in

ಸೂಚನೆ : ಬಿಡಿ ಪ್ರತಿ **4-00** ರೂ.
ವಾರ್ಷಿಕ ಚಂದಾ **50-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


## *ಈ ಸಂಚಿಕೆಯಲ್ಲಿ......*






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - 560 067



# ಸಂಪಾದಕೀಯ

**ಸೂಪರ್** ಪವರ್ ಅಮೆರಿಕದ ಅಧ್ಯಕ್ಷರಾದ ಕೂಡಲೆ ಬುಷ್ ಜೇಮ್ಸ್‌ಬಾಂಡ್‌ನಂತೆ ನಟಿಸಲು ಪ್ರಾರಂಭಿಸಿದ್ದಾರೆ. ಮೊತ್ತ ಮೊದಲಿಗೆ ತನ್ನ ಬಲಿಷ್ಠ ರಾಷ್ಟ್ರಕ್ಕೆ ಶತ್ರುಗಳಿಂದ ಭೀತಿ ಇರುವುದರಿಂದ N.M.D. ಎಂಬ ಹೈಟೆಕ್ ಬೇಲಿ ಯೋಚನೆ ಮೂಲಕ ಸೂಪರ್‌ಮ್ಯಾನ್‌ನಂತೆ ದೇಶ ಕಾಯುವುದಾಗಿ ಘೋಷಿಸಿದ್ದಾರೆ. ಅಮೆರಿಕದ ಘನೋದ್ದೇಶಕ್ಕೆ ಭಾರತದ ಕೇಸರಿ ಸರ್ಕಾರ ಮತ್ತು ಇಂಗ್ಲೆಂಡ್ ಸರ್ಕಾರ ಬಿಟ್ಟರೆ ಇನ್ನಾವ ದೇಶವು ಸಮ್ಮತಿಸಿ ಸಹಿ ಹಾಕಿಲ್ಲ. ಭಾರತ ಸರ್ಕಾರ ಮಾತ್ರ ತಾಂಡವವಾಡುತ್ತಿರುವ ಹಸಿವು, ಬಡತನ, ನಿರುದ್ಯೋಗ, ಅಸಮಾನತೆ ಎಲ್ಲವನ್ನೂ ಬದಿಗೆ ತಳ್ಳಿ ಅಮೆರಿಕದ ಚೇಲಾ ಆದರೆ ತಾನೂ ಸೂಪರ್ ಪವರ್ ಆಗಬಹುದೆಂದು ಭಾವಿಸಿದೆ.

ಹಿರೋಶಿಮಾ, ನಾಗಸಾಕಿ ನರಮೇಧದ ಪಾಪಪ್ರಜ್ಞೆ ಇಲ್ಲದೆ ಅಂತರಿಕ್ಷವನ್ನು ರಣಾಂಗಣ ಮಾಡಹೊರಟಿರುವುದು ಅಮೆರಿಕದ ಯುದ್ಧ ದಾಹ ಇಂದು ಜಗತ್ತನ್ನೇ ಆಳಬೇಕೆಂಬ ಅಧಿಕಾರ ದಾಹವನ್ನು ಎತ್ತಿ ತೋರಿಸುತ್ತದೆ. N.M.D.ಯಂತಹ ತಿಕ್ಕಲು ಪ್ರಯತ್ನಗಳು ಜಗತ್ತಿನಾದ್ಯಂತ ಸಂಪೂರ್ಣ ನಿಶ್ಯಸ್ತ್ರೀಕರಣಕ್ಕಾಗಿ ನಡೆಯುತ್ತಿರುವ ಹೋರಾಟಗಳಿಗೆ ಮುಳುವಾಗಲಿದೆ. ಈ ಸಂದರ್ಭದಲ್ಲಿ ಅಮೆರಿಕದಂತಹ ದೈತ್ಯರಾಷ್ಟ್ರದ ಎದಿರು ಪುಟ್ಟ ಫೆಸಿಫಿಕ್ ದ್ವೀಪದ ಮಹಿಳೆಯರು ನಡೆಸಿರುವ ಹೋರಾಟ ಮಹತ್ವಪೂರ್ಣದ್ದು. ಸ್ವಾಯತ್ತತೆ, ಸಮಾನತೆ, ನೆಲ, ಜಲ, ಬದುಕಿಗಾಗಿ ನಡೆಯುತ್ತಿರುವ ಅಂತಹ ಹೋರಾಟಗಳೇ ಸಾಮ್ರಾಜ್ಯಶಾಹಿಯ ದುಡಾಸೆಗೆ ಉತ್ತರವಾಗಬಲ್ಲದು.

*–ಸಂಪಾದಕೀಯ ಮಂಡಳಿ*

# ಸೂಪರ್ ಪವರ್ ಅಮೆರಿಕ ದೇಶಕ್ಕೆ
# ಎನ್.ಎಂ.ಡಿ. ಎಂಬ ಹೈಟೆಕ್ ರಕ್ಷಾಕವಚ

National Missile Defence (ರಾಷ್ಟ್ರೀಯ ರಕ್ಷಣಾ ಕ್ಷಿಪಣಿ ಯೋಜನೆ) ಎಂಬುದು ಬುಷ್ ಸರ್ಕಾರ ಜಾರಿಗೆ ತರಬೇಕೆಂದಿರುವ ರಕ್ಷಣಾ ವ್ಯವಸ್ಥೆ. ಮೂರು ಹಂತಗಳಲ್ಲಿ ರಾಡಾರುಗಳ ಮೂಲಕ ತಮ್ಮತ್ತ ಬರುತ್ತಿರುವ, ಗುರಿ ಇಟ್ಟಿರುವ ಕ್ಷಿಪಣಿಗಳನ್ನು ಕಂಡು ಹಿಡಿದು ಅವು ಸಿಡಿವ ಮುನ್ನ ತಮ್ಮ ಕ್ಷಿಪಣಿಗಳ ಮೂಲಕ ಹೊಡೆದುರುಳಿಸುವ ಈ ವ್ಯವಸ್ಥೆಯ ಮೂಲಕ ಅಮೆರಿಕ ದೇಶವನ್ನು ಭದ್ರ ಕವಚದೊಳಗೆ ರಕ್ಷಿಸಿಕೊಳ್ಳಲು ಬುಷ್ ಹೊರಟಿದ್ದಾರೆ. ಇದು ಹೇಗೆಂದರೆ ರಾಮಾಯಣದ ಸೀರಿಯಲ್‌ನಲ್ಲಿ ಒಬ್ಬರು ಬಿಟ್ಟ ಬಾಣವನ್ನು ಮತ್ತೊಂದು ಬಾಣ ಬಿಟ್ಟು ನಡುವೆಯೇ ಸುಟ್ಟು ಹಾಕುವುದನ್ನು ತೋರಿಸುತ್ತಿದ್ದಂತೆ.

ಈ ವ್ಯವಸ್ಥೆಯ ಮುಖ್ಯ ಉದ್ದೇಶವೆಂದರೆ ಅಮೆರಿಕದ ಸಂಸ್ಥಾನವನ್ನು ರಕ್ಷಿಸಿಕೊಳ್ಳುವುದು. ಈ ವ್ಯವಸ್ಥೆ ಮೂರು ಹಂತಗಳಲ್ಲಿ ಶತ್ರು ಕ್ಷಿಪಣಿಗಳನ್ನು ನಾಶಪಡಿಸುತ್ತದೆ. ಒಂದು ಶತ್ರು ಪ್ರದೇಶದ ಗಡಿಗೆ ಹತ್ತಿರವಿರುವ ಸಮುದ್ರದಲ್ಲಿನ ಹಡಗುಗಳಲ್ಲಿ ಕ್ಷಿಪಣಿಗಳನ್ನಿರಿಸಿ ಶತ್ರು ಕ್ಷಿಪಣಿಯು ಹೊರಟ ಪ್ರಾರಂಭದಲ್ಲೇ ಅಂದರೆ ಅಂತರಿಕ್ಷ ಸೇರುವ ಮೊದಲೇ ಹೊಡೆದುರುಳಿಸುವುದು. ಎರಡನೆಯದು ಶತ್ರು ಕ್ಷಿಪಣಿ ಅಂತರಿಕ್ಷ ತಲುಪಿದ ಮೇಲೆ ವಾಯು ಕ್ಷಿಪಣಿಗಳ ಮೂಲಕ ಹೊಡೆದುರುಳಿಸುವುದು, ಮೂರನೆಯದು ಅಂತರಿಕ್ಷ ನೌಕೆಯ ಮೂಲಕ ತಮ್ಮ ನೆಲೆಯ ಮೇಲೆ ಧಾವಿಸುತ್ತಿರುವ ಕ್ಷಿಪಣಿಗಳನ್ನು ನಾಶಪಡಿಸುವುದು. ಇರುವ ಎಲ್ಲಾ ತಾಂತ್ರಿಕ ಕೌಶಲ್ಯ, ಸಾಮರ್ಥ್ಯಗಳನ್ನು ಬಳಸಿಕೊಂಡು ನಾಶದ ವಿಧಾನವನ್ನು ರಚಿಸುವ ಹುಚ್ಚು ಹತ್ತಿಸಿಕೊಂಡಿದೆ ಅಮೆರಿಕ ಸರ್ಕಾರ!




-ಪತಿ

Theatre missile defence ಎಂದು ಕರೆಯಲಾಗುವ ಮತ್ತೊಂದು ವ್ಯವಸ್ಥೆಯನ್ನು ಜಾರಿಗೊಳಿಸಲು ಅಮೆರಿಕ ಸರ್ಕಾರ ಹೊರಟಿದೆ. ಈ ವ್ಯವಸ್ಥೆಯ ಮೂಲಕ ಪರೋಕ್ಷವಾಗಿ ಅಮೆರಿಕ ದೇಶವನ್ನು ರಕ್ಷಿಸಿಕೊಳ್ಳುವುದು ಬುಷ್ ಉದ್ದೇಶ. N.M.D.ಯ ಮೂಲಕ ಸಾಧ್ಯವಾಗದ್ದನ್ನು T.M.D.ಯ ಮೂಲಕ ಸಾಧ್ಯವಾಗಿಸಿಕೊಳ್ಳುವುದು. ತನ್ನ ಮಿತ್ರ ರಾಷ್ಟ್ರಗಳ ಗಡಿಯಲ್ಲಿ ಭೂ, ವಾಯು, ಸಮುದ್ರದಲ್ಲಿ, ಅಣ್ವಸ್ತ್ರಯುಕ್ತ, ಅಣ್ವಸ್ತ್ರ ಹೊಂದುವ ಸಾಮರ್ಥ್ಯವಿರುವ ಅಮೆರಿಕದ ಶತ್ರು ರಾಷ್ಟ್ರಗಳತ್ತ ಗುರಿಯಿಟ್ಟು ರಾಡಾರುಗಳನ್ನು ಸ್ಥಾಪಿಸುವುದೇ T.M.D. ವ್ಯವಸ್ಥೆ. ಅಮೆರಿಕ ಶತ್ರುವೆಂದು ಪರಿಗಣಿಸಿರುವ ರಾಷ್ಟ್ರಗಳೆಂದರೆ ಇರಾನ್, ಇರಾಕ್, ಲಿಬ್ಯಾ, ಉತ್ತರ ಕೊರಿಯ. ಇದೇ ಶತ್ರು ರಾಷ್ಟ್ರಗಳಿಂದ ರಕ್ಷಿಸಿಕೊಳ್ಳಲು ಮಿತ್ರ ರಾಷ್ಟ್ರಗಳಿಗೂ T. M. D. ವ್ಯವಸ್ಥೆಯನ್ನು ದ. ಕೊರಿಯ, ಜಪಾನ್, ತೈವಾನ್ ದೇಶಗಳ ಸಹಕಾರ ದೊಂದಿಗೆ ಪೂರ್ವ ಏಶಿಯಾದಲ್ಲಿ ಅಳವಡಿಸಲು ಅಮೆರಿಕ ಸರ್ಕಾರ ಹವಣಿಸುತ್ತಿದೆ. ಚೈನಾ ಮತ್ತು ಉ. ಕೊರಿಯವನ್ನು ಬಗ್ಗು ಬಡಿಯಲು. ಇಸ್ರೇಲಿನ ಸಹಕಾರದೊಂದಿಗೆ ಮಧ್ಯ ಪೂರ್ವ ಏಶಿಯಾದಲ್ಲಿ ಇದನ್ನು ಸ್ಥಾಪಿಸಿ ಇರಾನ್, ಇರಾಕ್, ಲಿಬ್ಯಾವನ್ನು ಹತ್ತಿಕ್ಕುವುದು, ರಷ್ಯಾವನ್ನು ಹತ್ತಿಕ್ಕಲು ತನ್ನ ನ್ಯಾಟೊ (NATO North Atlantic Treaty Organisation) ಸದಸ್ಯ ರಾಷ್ಟ್ರಗಳ ಸಹಕಾರದೊಂದಿಗೆ ಯುರೋಪಿನಲ್ಲಿ T.M.D.ಯನ್ನು ಸ್ಥಾಪಿಸಲು ಅಮೆರಿಕ ಬಯಸಿದೆ.

ಮಿತ್ರ ರಾಷ್ಟ್ರಗಳ ರಕ್ಷಣೆಗಿಂತ N.M.D.ಯನ್ನು ಬಲಪಡಿಸುವುದು T.M.D.ಯ ಉದ್ದೇಶ.ಆ ಮೂಲಕ ಮಿತ್ರ ರಾಷ್ಟ್ರಗಳನ್ನು ಅಧೀನದಲ್ಲಿಟ್ಟುಕೊಂಡು ತನ್ನ ಸರ್ವಾಧಿಕಾರವನ್ನು ಕಾಯ್ದುಕೊಳ್ಳುವ ಆಸೆ ಅಮೆರಿಕ ಸರ್ಕಾರದ್ದು.

**N.M.D.ಯಂತಹ ವ್ಯವಸ್ಥೆ ಅಮೆರಿಕಾ ಸರ್ಕಾರಕ್ಕೆ ಯಾಕೆ ಬೇಕಾಗಿದೆ?**

ದಗಾಕೋರ ರಾಷ್ಟ್ರಗಳೆಂದು ಅಮೆರಿಕ ಸರ್ಕಾರದಿಂದ ಹಣೆಪಟ್ಟಿ ಹಚ್ಚಿಸಿಕೊಂಡಿರುವ ರಾಷ್ಟ್ರಗಳಿಂದ ತನ್ನನ್ನು ರಕ್ಷಿಸಿಕೊಳ್ಳಲು ಈ ವ್ಯವಸ್ಥೆ ಬೇಕಾಗಿದೆ. (ಅಂತರ ರಾಷ್ಟ್ರೀಯ ಕಾನೂನುಗಳನ್ನು ನಿರಂತರವಾಗಿ ಮುರಿಯುವ ತನ್ನ ಗಡಿಯಾಚೆ ಮಾನವ ಹಕ್ಕುಗಳನ್ನು ನಿರಂತರವಾಗಿ ಹತ್ತಿಕ್ಕುವ ರಾಷ್ಟ್ರಗಳನ್ನು ದಗಾಕೋರ ರಾಷ್ಟ್ರಗಳೆಂದು ಕರೆಯುವುದಾದರೆ ಅಮೆರಿಕ ದೇಶವನ್ನೆ ದಗಾಕೋರ ರಾಷ್ಟ್ರವೆನ್ನಬೇಕು. ಅಮೆರಿಕ ತನ್ನ ಗಡಿಯಾಚೆ, 1945 ರಿಂದ ಕೊಂದು ಹಾಕಿರುವ ನಾಗರೀಕರ ಲೆಕ್ಕವಿಲ್ಲ, ಸರ್ವಾಧಿಕಾರವನ್ನು ಬೆಂಬಲಿಸಿರುವ ಸಂದರ್ಭಗಳ ಲೆಕ್ಕವೂ ಇಲ್ಲ.) ಇಂತಹ ಅಮೆರಿಕ ದೇಶಕ್ಕೆ ಅವರೆಂದುಕೊಂಡಿರುವ ದಗಾಕೋರ ದೇಶಗಳು ಕ್ಷಿಪಣೆಗಳನ್ನು ತಯಾರಿಸಿ ತನ್ನ ಮೇಲೆ ಪ್ರಯೋಗಿಸಬಹುದೆಂಬ ಆತಂಕ. ಯಾವ ದೇಶಗಳನ್ನು ದಗಾಕೋರ ದೇಶಗಳೆಂದು ಅಮೆರಿಕಾ ಕರೆಯುತ್ತದೆಯೋ ಆ ದೇಶಗಳು N.P.T.ಯ ಸದಸ್ಯ ರಾಷ್ಟ್ರಗಳಾಗಿವೆ, ಅಣ್ವಸ್ತ್ರ ಮುಕ್ತ ರಾಷ್ಟ್ರಗಳೆಂದು ತಮ್ಮನ್ನು ಘೋಷಿಸಿಕೊಂಡಿವೆ. ಆದರೂ ಈ ದೇಶಗಳು ಅಣ್ವಸ್ತ್ರ ತಯಾರಿಸಿ ಬಿಡಬಹುದೆಂಬ ಅನುಮಾನ ವಿರುವುದರಿಂದ, ಅವು ತಮಗೆ ಆತಂಕ ಒಡ್ಡಬಹು ದೆಂದು ಈ ವ್ಯವಸ್ಥೆಗೆ ಕೈ ಹಾಕಿದ್ದೇವೆ ಎಂದು ಅಮೆರಿಕ ಸರ್ಕಾರ ಹೇಳುತ್ತಿದೆ.

ಆದರೆ ದಗಾಕೋರ ರಾಷ್ಟ್ರಗಳ ಆತಂಕಕ್ಕಿಂತ ಅಮೆರಿಕಾಕ್ಕಿರುವ ಒಳ ಉದ್ದೇಶಗಳೇ ಬೇರೆ ಇವೆ. ಅದೆಂದರೆ ಅಣ್ವಸ್ತ್ರ ರಾಷ್ಟ್ರವುಳ್ಳ ಎದುರಾಳಿಗಳ ಮೇಲೆ ಮೇಲುಗೈ ಸಾಧಿಸುವುದು. ನಿರ್ಧಿಷ್ಟವಾಗಿ ರಷ್ಯಾ ಮತ್ತು ಚೈನಾದ ಮೇಲೆ. ವಿವಿಧ ತಾಂತ್ರಿಕತೆಯ ಮೂಲಕ N. M.D.E. ಯೋಜನೆಯನ್ನು ಅಭಿವೃದ್ಧಿ ಪಡಿಸಿ ಅಂತರಿಕ್ಷದಲ್ಲಿ ತನ್ನ ಮಿಲಿಟರಿ ಅಧಿಪತ್ಯ ಸ್ಥಾಪಿಸುವುದು, ಅಂತರಿಕ್ಷದ ಮೂಲಕ ಇಡೀ ಜಗತ್ತಿನ ಮೇಲೆ ಕಾವಲಿಡುವುದು. ಇಂತಹ ಉದ್ದೇಶವನ್ನು ಸಾಧ್ಯಗೊಳಿಸುವ ಸಾಮರ್ಥ್ಯವಿರುವ ಇತರ ರಾಷ್ಟ್ರಗಳನ್ನು ಹತ್ತಿಕ್ಕುವುದು. (ಎಲ್ಲಾ ಮುಖ್ಯ ಮಾಹಿತಿ ತಂತ್ರಜ್ಞಾನದ ಯುದ್ಧವನ್ನು ಜಯಿಸಿ ತನ್ನ ಹತೋಟಿಯಲ್ಲಿಟ್ಟುಕೊಳ್ಳುವುದು) ಅಂತರಿಕ್ಷ ರಣಾಂಗಣದ ವಿವಿಧ ರೀತಿಯ ಅಂತರಿಕ್ಷ ಯುದ್ಧಾಸ್ತ್ರ ತಯಾರಿಸಿ ತನ್ನ ಶ್ರೇಷ್ಠತೆಯನ್ನು ಮೆರೆಸುವುದು, ಅಂತರಿಕ್ಷದಲ್ಲಿ ತನ್ನ ಹಿಡಿತ ಸಾಧಿಸಿಕೊಂಡು, ಅಣ್ವಸ್ತ್ರಗಳಲ್ಲದೆ ಸಾಂಪ್ರದಾಯಿಕ ಯುದ್ಧ ವಿಧಾನಗಳ ಮೇಲೂ ತನ್ನ ಪ್ರಭುತ್ವ ಸಾಧಿಸಿಕೊಳ್ಳುವುದು.

**ದಗಾಕೋರ ರಾಷ್ಟ್ರಗಳೇನೆನ್ನುತ್ತವೆ?**

ದಗಾಕೋರ ರಾಷ್ಟ್ರಗಳಿಂದ ಆತಂಕವಿದೆ ಎಂದು ಹೇಳುವುದು ಶುದ್ಧ ನಗೆ ಪಾಟಲು. ಯಾಕೆಂದರೆ ದಗಾಕೋರ ರಾಷ್ಟ್ರಗಳ ಉದ್ದೇಶವನ್ನು ಅನುಮಾನಿಸಲು ಕಾರಣಗಳೇ ಇಲ್ಲ. ಈಗಾಗಲೆ ಈ ರಾಷ್ಟ್ರಗಳು ತಮ್ಮನ್ನು ಅಣ್ವಸ್ತ್ರ ಮುಕ್ತ ರಾಷ್ಟ್ರಗಳೆಂದು ಘೋಷಿಸಿಕೊಂಡಿವೆ. ಈ ರಾಷ್ಟ್ರಗಳಿಗೆ ಮುಂದೆಯೂ ಅಮೆರಿಕಾವನ್ನು ಅಣ್ವಸ್ತ್ರಗಳ ಮೂಲಕ ಎದುರಿಸಬೇಕೆನ್ನುವ ಉದ್ದೇಶಗಳಿಲ್ಲ. ಗೌಪ್ಯವಾಗಿ ಅಣ್ವಸ್ತ್ರಗಳನ್ನು ಅಭಿವೃದ್ಧಿ ಪಡಿಸಿ ಮೇಲುಗೈ ಪಡೆಯಬೇಕೆಂಬ ಉದ್ದೇಶವೂ ಇಲ್ಲ. ತನ್ನ ಭೀತಿ ಆತಂಕವನ್ನು ಸಮರ್ಥಿಸಿಕೊಳ್ಳಲು ಅಮೆರಿಕ ಅಸಂಬದ್ಧವಾಗಿ,

ನಾಟಕೀಯವಾಗಿ ಸುಳ್ಳಿನ ಭೀತಿಯನ್ನು ಸೃಷ್ಟಿಸಿಕೊಂಡಿದೆ. ಆ ಸುಳ್ಳು ಭೀತಿಗಳ ಮರೆಯಲ್ಲಿ ತನ್ನ ಒಳ ಉದ್ದೇಶಗಳನ್ನು ಸಾಧಿಸಿಕೊಳ್ಳ ಬಯಸಿದೆ.

ಅಕಸ್ಮಾತ್ ಯಾವುದೇ ರಾಷ್ಟ್ರ ನಡೆಸುವ ಅಣ್ವಸ್ತ್ರಗಳ ದಾಳಿಯನ್ನು ಎದುರಿಸುವ ಸಾಮರ್ಥ್ಯ ಅಮೆರಿಕಾ ರಾಷ್ಟ್ರಕ್ಕಿದ್ದರೂ, ಸಹ ಹಿಮ್ಮೆಟ್ಟಿಸುವ ತಂತ್ರವಾಗಿ (Detterance) ಅಣ್ವಸ್ತ್ರಗಳು ನ್ಯೂಕ್ಲಿಯರ್ ಭದ್ರತೆ ನೀಡಲಾರವು ಎಂದು ಅಮೆರಿಕ ಹೇಳುತ್ತಲೇ ಬಂದಿದೆ. ಇದು ನಿಜವೂ ಹೌದು, ಅಣ್ವಸ್ತ್ರಗಳಿಂದ ಭದ್ರತೆಗಿಂತ ಭೀತಿ, ಅಭದ್ರತೆಯೇ ಹೆಚ್ಚು ಅಲ್ಲದೆ N.M.D / T.M.D ಮೂಲಕ ಭದ್ರತೆ ಸಾಧಿಸಿಕೊಳ್ಳುವುದು ಪರಿಸ್ಥಿತಿಯನ್ನು ಇನ್ನೂ ಹದಗೆಡಿಸುತ್ತದೆ.

ಭಯೋತ್ಪಾದಕರಿಂದ ನ್ಯೂಕ್ಲಿಯರ್ ಭೀತಿ ಇರುವುದರಿಂದ ತಮ್ಮನ್ನು ರಕ್ಷಿಸಿಕೊಳ್ಳಲು N.M.D.ಯ ರಕ್ಷಾಕವಚ ತಯಾರಿಸಿಕೊಳ್ಳಬೇಕೆಂದು ಅಮೆರಿಕ ಹೇಳುತ್ತಿದೆ. ಇದು ಸುಳ್ಳು! ಯಾಕೆಂದರೆ ಭಯೋತ್ಪಾದಕರ ಗುಂಪುಗಳಿಗೆ ಸೂಟ್‌ಕೇಸ್ ಬಾಂಬ್‌ನ ಬಳಕೆ ಅಥವಾ ಕಡಿಮೆ ಅಂತರದಲ್ಲಿ ವಾಯು ಅಥವಾ ಸಮುದ್ರದ ಮೂಲಕ ರಕ್ಷಾ ಕವಚದೊಳಗೆ ಹಾಯಿಸಬಹುದಾದ ಅಣ್ವಸ್ತ್ರವನ್ನು ಪ್ರಯೋಗಿಸುವುದು ಸುಲಭ ಸಾಧ್ಯ. ಅದು ದುಬಾರಿಯೂ ಅಲ್ಲ. ಅಂತಹ ಆಕ್ರಮಣವನ್ನು ಯಾರು ಮಾಡಿದರೆಂಬ ಸುಳಿವೂ ಇಲ್ಲದೆ ಮಾಡಬಹುದು.

### N.M.D. / T.M.D.ಯ ಪರಿಣಾಮವೇನು?

ಈ ವ್ಯವಸ್ಥೆಯ ಮೂಲಕ ಅಮೆರಿಕ ತಮಗೆ ಬೇಕಾದಂತೆ ಅಣ್ವಸ್ತ್ರಗಳನ್ನು ಅಭಿವೃದ್ಧಿ ಪಡಿಸಿಕೊಳ್ಳುವುದನ್ನು ಸಮರ್ಥಿಸಿ ಕೊಳ್ಳುತ್ತದೆ. ತನ್ನನ್ನು ಕೆಣಕಿದರೆಂಬ ಕಾರಣವಾಗಬಹುದು, ತನ್ನ ರಕ್ಷಣೆಯ ಕಾರಣವಾಗಬಹುದು. ಈ ವ್ಯವಸ್ಥೆಯ ಮೂಲಕ ಇತರ ವೈರಿ ಅಣ್ವಸ್ತ್ರ ರಾಷ್ಟ್ರಗಳ ವಿರುದ್ಧ ಮೇಲುಗೈ ಸಾಧಿಸಬಹುದೆಂಬ ನಂಬಿಕೆಯೂ ಬಲವಾಗುತ್ತದೆ. ಮೊದಲಿಗೆ ವೈರಿಗಳ ಮೇಲೆ ಆಕ್ರಮಣ ಮಾಡಿ ಅವರ ಎಲ್ಲಾ ಯುದ್ಧಾಸ್ತ್ರ ಕ್ಷಿಪಣಿಗಳನ್ನು ನಾಶಪಡಿಸಿ ತನ್ನ ರಕ್ಷಾಕವಚದೊಳಗೆ ಸುರಕ್ಷಿತವಾಗಿರಬಹುದು. (N.M.D. ಯೋಜನೆ 50% ಯಶಸ್ವಿಯಾದರೂ ಇದು ಸಾಧ್ಯವಾಗಬಹುದೆಂಬ ನಂಬಿಕೆ) ವೈರಿಗಳು ಮತ್ತೆ ಪ್ರಯೋಗಿಸುವ ಉಳಿದ ಕ್ಷಿಪಣಿಗಳನ್ನು ಹೊಡೆದುರುಳಿಸಲು ರಕ್ಷಾಕವಚದೊಳಗೆ ಕಾಯಬಹುದು.

ಅಮೆರಿಕದ ಈ ಸಾಧ್ಯತೆಯನ್ನು ಎದುರಿಸಲು ವೈರಿ ರಾಷ್ಟ್ರಗಳು ಇಂತಹ ವ್ಯವಸ್ಥೆಗೆ ಸಮನಾದ ಪ್ರಯತ್ನ ಮಾಡಬಹುದು. ಈ ಪ್ರಯತ್ನ ನಾಲ್ಕು ವಿಧಗಳಲ್ಲಿ ಆಗಬಹುದು.

ಅ) ಅಣ್ವಸ್ತ್ರಗಳನ್ನು ಮರೆಮಾಡಿ ಪ್ರಯೋಗಿಸಬಹುದು. ರಾಡಾರುಗಳ ಕಾರ್ಯ ತಂತ್ರವನ್ನು ನಾಶ ಪಡಿಸಬಹುದು.

ಆ) ಹೆಚ್ಚಿನ ಕ್ಷಿಪಣಿಗಳನ್ನು ತಯಾರಿಸಿ ಅಳವಡಿಸಬಹುದು.

ಇ) ಹೆಚ್ಚೆಚ್ಚು ಯುದ್ಧಾಸ್ತ್ರಗಳನ್ನು ಹೊತ್ತೊಯ್ಯುವ ಕ್ಷಿಪಣಿ ಗಳನ್ನು ತಯಾರಿಸಬಹುದು.

ಉದಾಹರಣೆಗೆ ಒಂದೇ ಕ್ಷಿಪಣಿ ಹಲವಾರು ಯುದ್ಧಾಸ್ತ್ರ ಗಳನ್ನು ಹೊತ್ತೊಯ್ಯುವುದಲ್ಲದೆ ಪ್ರಯೋಗಿಸಿದಾಗ ಕ್ಷಿಪಣಿಯಿಂದ ಬೇರೆಯಾಗಿ ಒಂದೇ ಸಲಕ್ಕೆ ಸುಮಾರು 10-12 ಬೇರೆ ಬೇರೆ ಗುರಿ ಎಡೆಗೆ ಸಿಡಿಯುವಂತಹದು. ಪ್ರತಿಯೊಂದು ಅಸ್ತ್ರವೂ ಹೆಚ್ಚೆಚ್ಚು ಆಸ್ಫೋಟಕ ಪುಡಿಗಳನ್ನು ಹೊಂದುವಂತೆ ಮಾಡಬಹುದು.

ಈ) N.M.D. ವ್ಯವಸ್ಥೆಯ ಕಣ್ಣು, ಕಿವಿ, ನರಮಂಡಲವನ್ನು ನಾಶ ಪಡಿಸುವ ಅಂತರಿಕ್ಷ ಯುದ್ಧಾಸ್ತ್ರಗಳನ್ನು ತಯಾರಿಸಬಹುದು.

ಒಟ್ಟಿನಲ್ಲಿ ಈ ಯೋಜನೆ ಅಣ್ವಸ್ತ್ರಗಳ ಪೈಪೋಟಿಗೆ ದಾರಿ ಮಾಡಿಕೊಡುತ್ತದೆ. ಅಂತರಿಕ್ಷವನ್ನೆ ರಣಾಂಗಣವಾಗಿಸುವ ಹೊಸ ವಿಧಾನಕ್ಕೆ ಕಾರಣವಾಗುತ್ತದೆ. ಇದರಿಂದ ಜಾಗತೀಕ ಮಟ್ಟದಲ್ಲಿ ಆತಂಕ, ಅಭದ್ರತೆ ಹೆಚ್ಚಾಗುತ್ತದೆ. ಹೊಸ ಹೊಸ ಅಪಾಯಕಾರಿ ಅಣ್ವಸ್ತ್ರಗಳ ಸಂಖ್ಯೆ ಹೆಚ್ಚಾಗಲು ಕಾರಣವಾಗುತ್ತದೆ. ಅಣ್ವಸ್ತ್ರ ಮುಕ್ತ ಜಗತ್ತಿಗಾಗಿ ನಡೆಯುತ್ತಿರುವ ಹೋರಾಟಗಳು ಮಣ್ಣು ಪಾಲಾಗುತ್ತವೆ.

### ABM ಒಪ್ಪಂದವೆಂದರೇನು? ಅದೇಕೆ ಮುಖ್ಯ?

Anti Ballistic Missile ಒಪ್ಪಂದವನ್ನು 1972ರಲ್ಲಿ ರಷ್ಯಾ ಮತ್ತು ಅಮೆರಿಕ ಪರಸ್ಪರ ಒಪ್ಪಿ ಸಹಿ ಹಾಕಿದ್ದವು. ಕ್ಷಿಪಣಿಗಳ ಮೂಲಕ ದೇಶದ ಗಡಿಯನ್ನು ಕಾಪಾಡಿಕೊಳ್ಳುವುದನ್ನು ಈ ಒಪ್ಪಂದ ನಿಷೇಧಿಸುತ್ತದೆ. ಈ ನಿಷೇಧವು ಎರಡೂ ದೇಶಗಳು ಕ್ಷಿಪಣಿಗಳಿಂದ ಆಕ್ರಮಣ ಮಾಡುವ ಆಸೆಯನ್ನು ಹತ್ತಿಕಬಲ್ಲ ದಾಗಿತ್ತು. ಈ ಒಪ್ಪಂದವು ಹಲವಾರು ಒಪ್ಪಿತ ನಿರ್ಬಂಧಗಳನ್ನು ನ್ಯೂಕ್ಲಿಯರ್ ಸ್ಪರ್ಧೆಯ ಮೇಲೆ ಹೇರಿ ಎರಡೂ ದೇಶಕ್ಕೂ ಕಡಿವಾಣ ಹಾಕಿತು. ಕ್ಷಿಪಣಿಗಳ ತಯಾರಿಕೆಗೆ ಕಡಿವಾಣ ಹಾಕಿತ್ತು. ಈ ಒಪ್ಪಂದದಿಂದಾಗಿ SALT I, II (Strategic Arms Limitations Treaties - ಯುದ್ಧಾಸ್ತ್ರಗಳನ್ನು ಮಿತಿಗೊಳಿಸುವ

ಒಪ್ಪಂದ) ಮತ್ತು START I, II (Strategic Arms Reduction Treaties ಯುದ್ಧಾಸ್ತ್ರಗಳನ್ನು ಕಡಿಮೆ ಮಾಡುವ ಒಪ್ಪಂದ) ಒಪ್ಪಂದಗಳು ಸಾಧ್ಯವಾಗಿತ್ತು. ಈ ಒಪ್ಪಂದಗಳಿಂದಾಗಿ ಎರಡೂ ರಾಷ್ಟ್ರಗಳು ಒಬ್ಬರನ್ನೊಬ್ಬರು ಹಲವಾರು ಬಾರಿ ನಾಶ ಪಡಿಸಿಕೊಳ್ಳುವುದಕ್ಕಿಂತ ಕೆಲವೇ ಬಾರಿ ನಾಶ ಮಾಡಿಕೊಳ್ಳಲು ಸಾಧ್ಯವಾಗುವಂತೆ ಮಾಡಿತು. ಅಂದರೆ A.B.M. ಒಪ್ಪಂದದಿಂದ ಈಗಿನ ಶಸ್ತ್ರಾಸ್ತ್ರ ಸ್ಪರ್ಧೆಯನ್ನು ಸಂಪೂರ್ಣ ಮಟ್ಟಹಾಕುವುದಾಗಲಿ ಅಥವಾ ಸ್ಪರ್ಧೆಗೆ ಎಡೆಮಾಡಿಕೊಡುವ ಕಾರಣಗಳನ್ನು ನಿಷ್ಕ್ರಿಯಗೊಳಿಸುವುದಾಗಲಿ ಸಾಧ್ಯವಾಗಲಿಲ್ಲ. ಶಸ್ತ್ರಾಸ್ತ್ರ ಸ್ಪರ್ಧೆಗೆ ಹೊಸ ದಿಕ್ಕನ್ನು ನೀಡುವ ಮೂಲಕ ಇನ್ನೂ ಅಪಾಯಕಾರಿ, ಗಂಡಾಂತರಕಾರಿ ಆಗಬಹುದಾದ ಪರಿಸ್ಥಿತಿ ನಿರ್ಮಾಣ ವಾಗುವುದನ್ನು ಈ ಒಪ್ಪಂದ ತಡೆಯಿತು. 60ರ ದಶಕದ ಕೊನೆಯ ಹೊತ್ತಿಗೆ ಈ ಎರಡೂ ರಾಷ್ಟ್ರಗಳಿಗೆ ಇಬ್ಬರ ನಡುವಿರುವ ನ್ಯೂಕ್ಲಿಯರ್ ಸಮಾನತೆ ಸ್ಪಷ್ಟವಾಗಿತ್ತು. ಈ ಒಪ್ಪಿತ ಸಮಾನತೆಯು ಒಬ್ಬರ ಮೇಲೊಬ್ಬರು ಮೇಲುಗೈ ಸಾಧಿಸುವುದನ್ನು ನಿರರ್ಥಕ ಮಾಡಿತ್ತು. ಮತ್ತು ABM ಒಪ್ಪಂದಕ್ಕೆ ನಾಂದಿ ಹಾಡಿತು. ಈಗ ತಾನು ಮೇಲುಗೈ ಸಾಧಿಸಬಹುದೆಂಬ ಅಮೆರಿಕದ ನಂಬಿಕೆಯು ಒಪ್ಪಂದವನ್ನು ಮುರಿದುಹಾಕಲು ಅಥವಾ ತನಗೆ ಬೇಕಾದಂತೆ ಬದಲಾಯಿಸಿಕೊಳ್ಳಲು ಎಡಮಾಡಿಕೊಟ್ಟಿದೆ.

ಒಪ್ಪಂದವು ಪ್ರತಿಯೊಂದು ದೇಶದ ರಕ್ಷಣಾ ವ್ಯವಸ್ಥೆ (ರಾಡಾರುಗಳು, ಇಂಟರ್‌ಸೆಪ್ಟರ್‌ಗಳನ್ನೊಳಗೊಂಡ)ಯ ಮೇಲೆ ಮಿತಿಯನ್ನು ಹೇರಿತು. ಕೇವಲ ತನ್ನ ರಾಜಧಾನಿ, ICBM (ಮಿಲಿಟರಿ) ಸಂಕೀರ್ಣವನ್ನು ರಕ್ಷಿಸಿಕೊಳ್ಳಲು ಮಾತ್ರ ಅವಕಾಶ ನೀಡಿತು. ಮುಂದೆ 1974ರಲ್ಲಿ ನಡೆದ ಮಾತುಕತೆಯೂ ರಕ್ಷಿಸಿಕೊಳ್ಳ ಬಹುದಾದ ಸ್ಥಳವನ್ನು ಒಂದಕ್ಕೆ ಸೀಮಿತಗೊಳಿಸಿತು. ರಷ್ಯಾ, ಮಾಸ್ಕೋವನ್ನು, ಅಮೆರಿಕ ಗ್ರಾಂಡ್‌ಪಾರ್ಕಿನ ICBM ಸಂಕೀರ್ಣವನ್ನು ರಕ್ಷಿಸಿಕೊಳ್ಳಲು ನಿರ್ಧರಿಸಿದವು. ನೆಲ, ಸಮುದ್ರ, ವಾಯು, ಅಂತರಿಕ್ಷದಲ್ಲಿ ಹಾರಿಸುವ ಇಂಟರ್‌ಸೆಪ್ಟರ್ ವ್ಯವಸ್ಥೆಯನ್ನು ನಿಷೇಧಿಸಿತು. (Interceptor -ಒಳ ಬರುತ್ತಿರುವ ಬಾಂಬುಗಳ ಮೇಲೆ ದಾಳಿ ಮಾಡುವ ಅತಿ ವೇಗವಾಗಿ ಚಲಿಸುವ ಮಿಲಿಟರಿ ವಿಮಾನ). N.M.D. ವ್ಯವಸ್ಥೆಗೆ ಪೂರಕವಾದ ರಾಡಾರ್ ವ್ಯವಸ್ಥೆ (ರೇಡಿಯೋ ತರಂಗಗಳ ಮೂಲಕ ವೈರಿ ಅಸ್ತ್ರದ ನೆಲೆ, ಚಲನೆಯನ್ನು ಕಂಡುಹಿಡಿಯುವ ವ್ಯವಸ್ಥೆ)ಯನ್ನು ಅಮೆರಿಕದ ಹೊರಗೆ ಸ್ಥಾಪಿಸುವುದನ್ನು ಕಾನೂನುಬಾಹಿರ ಮಾಡಿತು. ಈ ಎಲ್ಲ ನಿಷೇಧಗಳನ್ನು N.M.D.ಯೋಜನೆ ಮೂಲಕ ಅಮೆರಿಕ ಮುರಿಯಲು ಹೊರಟಿದೆ. ಶತ್ರು ಪಡೆಯ ಮೇಲೆ ದಾಳಿ ಮಾಡಲು ಕಡಿಮೆ ಅಂತರದಲ್ಲಿ ಪ್ರಯೋಗಿಸಬಹುದಾದ ಬಾಂಬುಗಳು, ಶಸ್ತ್ರಗಳನ್ನು ಈ ಒಪ್ಪಂದ ನಿಷೇಧಿಸಲಿಲ್ಲ. ಆದರೆ ರಷ್ಯಾ ಮತ್ತು ಅಮೆರಿಕ ABM ಒಪ್ಪಂದದ ಉದ್ದೇಶಕ್ಕೆ ಸಮ್ಮತಿಸಿ N.M.D. ಯೋಜನೆಗೆ ಬೇಕಾದ T.M.D. ವ್ಯವಸ್ಥೆಯನ್ನು ಕೈಬಿಡಲು ಒಪ್ಪಿದವು. ಉದಾಹರಣೆಗೆ, N.M.D.ಗೆ ಬೇಕಾದ ರಾಡಾರುಗಳು, ಇಂಟರ್‌ಸೆಪ್ಟರ್‌ಗಳು.

**ತಾಂತ್ರಿಕವಾಗಿ N.M.D.ಯೋಜನೆ ಸಾಧ್ಯವೆ?**

ಇದಕ್ಕೆ ನಿರ್ದಿಷ್ಟವಾದ ಉತ್ತರವಿಲ್ಲ. ಇಂಟರ್‌ಸೆಪ್ಟರ್‌ಗಳ ತಯಾರಿಕೆ ತುಂಬಾ ಸಂಕೀರ್ಣವಾದುದು. ಇನ್ನು ಲೇಸರ್, ಇನ್ನಿತರ ಹೆಚ್ಚು ಪರಿಣಾಮಕಾರಿಯಾದ ಸಾಧನಗಳನ್ನು ತಯಾರಿಸುವುದೆಂದರೆ ಇನ್ನೂ ಕಾಲಿಡದ ತಾಂತ್ರಿಕ ಕೌಶಲ್ಯದ ರಂಗಕ್ಕೆ ಕಾಲಿರಿಸಿದಂತೆ ಮತ್ತು ಅಪೂರ್ಣ, ಅನಿಶ್ಚಯುತ ಪ್ರಯೋಗಗಳ ಪ್ರಯತ್ನಕ್ಕೆ ಕೈಹಾಕಿದಂತೆ. ಅಲ್ಲದೆ ರಕ್ಷಾಕವಚವನ್ನು ಅಸಮರ್ಥಗೊಳಿಸುವ ಪ್ರತಿರೋಧಿ ತಾಂತ್ರಿಕತೆ ಮತ್ತು ಕೌಶಲ್ಯಗಳನ್ನು ಮಾಡುವುದು ಸುಲಭ. ಇನ್ನೂ ಗೊತ್ತಿರದ ಪ್ರಯತ್ನ ತತ್‌ಕ್ಷಣಕ್ಕೆ ಸಾಧ್ಯವಿಲ್ಲ ವೆನ್ನುವುದು ಪಟ್ಟಭದ್ರ ಹಿತಾಸಕ್ತಿಗಳಿಗೆ ಪೂರಕವಾಗಿ ಕೆಲಸ ಮಾಡುತ್ತದೆ. ಈ ಪ್ರಯತ್ನ ಸಾಧ್ಯವೋ ಇಲ್ಲವೋ ಎಂಬುದು ತಾರಾ ಸಮರ ಕಾರ್ಯಕ್ರಮ (star war programme) ಉಳಿಯುವುದೇ, ಹೆಚ್ಚಾಗುವುದೇ ಎಂಬುದನ್ನು ನಿರ್ಧರಿಸುವುದಿಲ್ಲ. ಸಮರ ಕೈಬಿಡಬೇಕೆನ್ನುವುದು ನೈತಿಕತೆಯಾಧರಿಸಿದ ರಾಜಕೀಯ ನಿರ್ಧಾರವೇ ಹೊರತು ಆರ್ಥಿಕ, ತಾಂತ್ರಿಕ ವಿಚಾರ ಆಧರಿಸಿದ್ದಲ್ಲ. ಈ ವ್ಯವಸ್ಥೆ ಜಾರಿಗೊಳಿಸಲು ಟ್ರಿಲಿಯನ್ ಗಟ್ಟಲೆ ಡಾಲರುಗಳು ಬೇಕು. (ಒಂದು ಟ್ರಿಲಿಯನ್ ಎಂದರೆ 1,000,000,000,000,000,000) ಅಮೆರಿಕದ ಯುದ್ಧಾಸ್ತ್ರ ತಯಾರು ಮಾಡುವ ಕೈಗಾರಿಕೆಗಳಿಗೆ ಮತ್ತದನ್ನು ಬೆಂಬಲಿಸುವ ಜಾಲಗಳಿಗೆ ಈ ಯೋಜನೆಯೊಂದು ಬಾಯಲ್ಲಿ ನಿರೂರಿಸುವಂತದ್ದು.

**NMDಯನ್ನು ವಿರೋಧಿಸುವ ಬದಲು ಬೆಂಬಲಿಸಲು ಭಾರತ ಏಕೆ ನಿರ್ಧರಿಸಿತು?**

ಪೋಕ್ರಾನ್ 2ರ ನಂತರವೂ ಭಾರತ ಸರ್ಕಾರ, ಅಮೆರಿಕದ N.M.D.ಯೋಜನೆಯನ್ನು, ಈಗಾಗಲೇ ಇರುವ ಅಭದ್ರ ನ್ಯೂಕ್ಲಿಯರ್ ಪರಿಸ್ಥಿತಿಯನ್ನು ಮತ್ತಷ್ಟು ಆತಂಕಮಯ ವಾಗಿಸುವುದು, ಅಂತರಿಕ್ಷದಲ್ಲಿ ಶಸ್ತ್ರಾಸ್ತ್ರ ಪೈಪೋಟಿಯನ್ನು ಹೆಚ್ಚಿಸುವುದು, ಅಮೆರಿಕದ ನ್ಯೂಕ್ಲಿಯರ್ ಪ್ರಾಬಲ್ಯವನ್ನು

ಸಂಸ್ಕೀಕರಣಗೊಳಿಸಿ ಹೆಚ್ಚಿನ ಆತಂಕ, ವೈರತ್ವಕ್ಕೆ ಕಾರಣವಾಗ ಬಹುದೆಂದು ಅರ್ಥೈಸಿಕೊಂಡಿತ್ತು. ಅಮೆರಿಕ ಬಿಟ್ಟು ಇನ್ನಿತರ ನ್ಯೂಕ್ಲಿಯರ್ ದೇಶಗಳಂತೆ ಭಾರತವು NMD ವ್ಯವಸ್ಥೆ ಇಲ್ಲದ ಜಗತ್ತನ್ನು ಬಯಸಿತ್ತು. ಆ ಕಾರಣಕ್ಕಾಗಿಯೇ ಮೊತ್ತ ಮೊದಲಿಗೆ ಭಾರತವೇ NMDಯನ್ನು ವಿರೋಧಿಸಿತ್ತು. ಅಮೆರಿಕವು ನ್ಯೂಕ್ಲಿಯರ್ ದೇಶಗಳ, ನ್ಯೂಕ್ಲಿಯಾರ್ ಅಲ್ಲದ ದೇಶಗಳ (ಅವು ಮಿತ್ರ ದೇಶವಾಗಿರಲಿ, ವೈರಿಗಳಾಗಿರಲಿ, ಮೈತ್ರಿಕೂಟ ದಲ್ಲಿರಲಿ) ವಿರೋಧವನ್ನು ಕಡೆಗಣಿಸಿ NMD ಯೋಜನೆಗೆ ಕೈಹಾಕಲು ನಿರ್ಧರಿಸಿದಾಗ ಭಾರತವು ಅಮೆರಿಕವನ್ನು ಕಡೆಗಣಿಸಿ ಆಪತ್ತು ತಂದುಕೊಳ್ಳುವ ಬದಲು ಅದರೊಂದಿಗೆ ಕೈಗೂಡಿಸಲು ನಿರ್ಧರಿಸಿತು. ಬೆಂಬಲಿಸಿ ಅವರ ಕೃಪೆಗೆ ಪಾತ್ರರಾಗಿ ಇನಾಮು ಪಡೆಯುವ ಭರವಸೆ ಭಾರತಕ್ಕೆ!

ರಾಷ್ಟ್ರೀಯ, ಜಾಗತಿಕ ಹಿತಾಸಕ್ತಿಗಳು ಜಾಗತೀಕ ನಿಶ್ಯಸ್ತ್ರೀಕರಣಕ್ಕೆ, NMDಯಂತಹ ಯೋಜನೆಗಳನ್ನು ವಿರೋಧಿಸುವುದಕ್ಕೆ ಪಟ್ಟ ಪ್ರಯತ್ನಗಳು ಸಂಕುಚಿತ, ಹುಚ್ಚು ನಿರ್ಧಾರಗಳಿಂದಾಗಿ ಮಣ್ಣು ಪಾಲಾಗುತ್ತಿವೆ. ನ್ಯೂಕ್ಲಿಯರ್ ಶಕ್ತಿ ಎಂದು ಅಮೆರಿಕದಿಂದ ಗುರುತಿಸಿಕೊಳ್ಳಲು ಪ್ರಯತ್ನ ಮಾಡುವುದು ಅಮೆರಿಕದ ಮೇಲಿನ ಅವಲಂಬನೆಗೆ, ಅಧೀನತೆಗೆ ಕಾರಣವಾಗುತ್ತದೆ ಎಂಬುದನ್ನು ಕಡೆಗಣಿಸಿ ಅವರೊಂದಿಗೆ ನಿಕಟ ಸಂಬಂಧ ಬೆಳೆಸಬೇಕೆಂಬ ಭಾರತದ ಹಂಬಲ ಹುಚ್ಚುತನದ್ದು. ಅವಲಂಬನೆ ಅಧೀನತೆ ವಿದೇಶಾಂಗ ನೀತಿಯನ್ನೆ ಅಮೆರಿಕ ಬಯಸಿದಂತೆ ರೂಪಿಸಿಕೊಳ್ಳುವಂತೇ ಮಾಡುವುವಾದರೂ ಅಮೆರಿಕದ ಸ್ನೇಹ ಬೇಕೆಂಬುದು ಹುಚ್ಚುತನವೇ. ಇಂತಹ ಅಲ್ಪಬುದ್ಧಿಯ ಸಂಕುಚಿತ ನಿರ್ಧಾರಗಳು ಉತ್ತಮ ಗುರಿಯತ್ತ ಸಾಗುವುದನ್ನು ತಡೆಯುತ್ತವೆ.

**NMDಯನ್ನು ಸಮರ್ಥಿಸುವುದರಿಂದ ಭಾರತಕ್ಕೆ ಪ್ರಯೋಜನವಾಗುವುದಿಲ್ಲವೇ? ಅಮೆರಿಕದೊಡನೆ ನಿಕಟ ಸಂಬಂಧ ಹೊಂದಲು, ಅಥವಾ ಮಿತ್ರ ರಾಷ್ಟ್ರವಾಗಲು ಪ್ರಯತ್ನಿಸುವುದರಲ್ಲಿ ತಪ್ಪೇನಿದೆ?**

NMD/TMDಗಳು ಅಮೆರಿಕ ಆಡ ಬಯಸುವ ಜೂಜಿನಾಟ. ಈ ಜೂಜಿನ ಮೂಲಕ ತನ್ನ ಮಿಲಿಟರಿ ಪ್ರಾಬಲ್ಯವನ್ನು ಸ್ಥಾಪಿಸಲು ಅಮೆರಿಕ ಪ್ರಯತ್ನಿಸುತ್ತಿದೆ. ಈ ಜೂಜನ್ನು ಸಮರ್ಥಿಸಿಕೊಂಡು ಭಾರತವೂ ಜೂಜಿನಲ್ಲಿ ಭಾಗಿಯಾಗಿದೆ. ಭಾಗಿಯಾಗುವ ಮೂಲಕ ನ್ಯೂಕ್ಲಿಯರ್ ಕ್ಲಬ್ ಸೇರಿಕೊಳ್ಳಲು, ಆರ್ಥಿಕ ದಿಗ್ಬಂದನಗಳನ್ನು ತೆರವು ಮಾಡಿಕೊಳ್ಳಲು ಇನ್ನಿತರ ಮಿಠಾಯಿ, ಲಾಲಿಪಪ್ಪುಗಳನ್ನು ಅಮೆರಿಕದಿಂದ ಪಡೆಯಲು ಭಾರತ ಹಪಹಪಿಸುತ್ತಿದೆ. ಮಿಠಾಯಿಗಳೆಂದರೆ - ಎರಡೂ ದೇಶಗಳು ಬಳಸಿಕೊಳ್ಳಬಹುದಾದ ದ್ವಿಉಪಯೋಗಿ ತಂತ್ರಜ್ಞಾನ, ಮಾಹಿತಿ-ತಂತ್ರಜ್ಞಾನದ ಮೇಲಿನ ಕಾವಲು, ಭಾರತ ಆಸೆಪಡುವ ಭದ್ರತಾ ಸಮಿತಿ ಸೀಟಿಗೆ ಬೆಂಬಲ ಇತ್ಯಾದಿ.

ನ್ಯೂಕ್ಲಿಯರ್ ಆತಂಕಗಳು, ವೈರಿಗಳು ಹೆಚ್ಚಾದಂತೆ, ಜಗತ್ತು ಸಂಪೂರ್ಣ ನಿಶ್ಯಸ್ತ್ರೀಕರಣದ ಗುರಿಯಿಂದ ದೂರ ಸರಿಯುತ್ತದೆ. ಇದು ಎಲ್ಲರಲ್ಲೂ ನಿರ್ದಿಷ್ಟವಾಗಿ ಭಾರತವೂ ಸೇರಿದಂತೆ ಇತರ ನ್ಯೂಕ್ಲಿಯರ್ ದೇಶಗಳಿಗೆ ಆತಂಕಕಾರಿಯಾಗುತ್ತದೆ. ಅಮೆರಿಕದಂತಹ ಬಲಾಢ್ಯ ದೇಶವೇ ತನ್ನ ಅಭದ್ರತೆಗಾಗಿ NMDಯಂತಹ ಯೋಜನೆ ಬೇಕೆನ್ನುವುದು, ನ್ಯೂಕ್ಲಿಯಾರ್ ವೈರಿಗಳಿಗೆ ಇನ್ನು ಹೆಚ್ಚಿನ ಅಭದ್ರತೆಯನ್ನುಂಟುಮಾಡುತ್ತದೆ. ಅಮೆರಿಕದ ಈ ನಿಲುವಿನಿಂದಾಗಿ ಚೈನಾ ತನ್ನ ನ್ಯೂಕ್ಲಿಯಾರ್ ಪಡೆಯ ಸಂಖ್ಯೆ, ಸಾಮರ್ಥ್ಯಗಳನ್ನು ಹೆಚ್ಚಿಸಿಕೊಳ್ಳುವಂತಾಗುತ್ತದೆ. ಇದು ಭಾರತದ ಮೇಲೂ ಪ್ರತಿಕೂಲ ಪರಿಣಾಮ ಬೀರುತ್ತದೆ. ಚೈನಾದ ಪ್ರತಿಕ್ರಿಯೆಯು, ಅಣ್ವಸ್ತ್ರ ಅಭಿವೃದ್ಧಿ ಪಡಿಸಿಕೊಳ್ಳಬೇಕೆಂಬ ಭಾರತದ ನಿಲುವಿಗೆ ನೆಪವಾಗುತ್ತದೆ. ಪಾಕಿಸ್ತಾನವೂ ಇದನ್ನೇ ಮಾಡಲು ಮುಂದಾಗುತ್ತದೆ.

ತನಗೆ ಸಿಗುವ ಅನಿಶ್ಚಿತ ಸಣ್ಣಪುಟ್ಟ ಪ್ರಯೋಜನಗಳಿಗಾಗಿ ತನ್ನ ಸಾರ್ವಭೌಮತ್ವವನ್ನು ಕಳೆದುಕೊಂಡು ಅಮೆರಿಕದ ಅಧೀನತೆಗೆ ಭಾರತ ಒಳಪಡುವಂತಾಗುತ್ತದೆ. ಬೆಂಬಲ NMDಗಷ್ಟೇ ಸೀಮಿತವಾಗದೆ ಪದೇ ಪದೇ ಅಮೆರಿಕದ ಇನ್ನಿತರ ಕ್ರಿಯೆಗಳನ್ನು ಬೆಂಬಲಿಸಬೇಕಾಗುತ್ತದೆ ಅಥವಾ ಗಂಭೀರವಾಗಿ ವಿರೋಧಿಸಲು ಸಾಧ್ಯವಾಗುವುದಿಲ್ಲ. ಇವೆಲ್ಲವನ್ನು ಮಾಡಲು ಹೊರಟಿರುವುದು ಅಮೆರಿಕದಿಂದ ಒಳ್ಳೆ ನಡತೆಯ ಸರ್ಟಿಫಿಕೇಟ್ ಪಡೆಯಲು! ಇವಿಷ್ಟು ಕಾರಣಗಳು ಸಾಕಲ್ಲವೆ! ಯಾವ ರೀತಿ NMD ಭಾರತದ ಮೇಲೆ ಪರಿಣಾಮ ಬೀರುತ್ತದೆ ಎಂಬುದಕ್ಕೆ.

ಅಮೆರಿಕದ ಮಿತ್ರರಾಷ್ಟ್ರವಾಗುವ ಆತುರದಲ್ಲಿ ಎರಡೂ ದೇಶಗಳ ನಡುವಿನ ಸಮಾನತೆಯನ್ನು ಗುರುತಿಸಿಕೊಳ್ಳುವ, ನೆನಪಿಸಿಕೊಳ್ಳುವ ಅಗತ್ಯವಿದೆ. ಇಲ್ಲಿ ಅಮೆರಿಕ ಬಯಸಿದಂತೆ ಮಾತ್ರ ಸಂಬಂಧ ಸಾಧ್ಯ. ಯಾಕೆಂದರೆ ಸಮಾನರ ನಡುವೆ ಸಂಬಂಧ ಸಾಧ್ಯವಿಲ್ಲ. ಭಾರತ ಅಮೆರಿಕದ ಮಿತ್ರ ರಾಷ್ಟ್ರವಾಗುವುದೆಂದರೆ ಅಮೆರಿಕ ಪಾಕಿಸ್ತಾನವನ್ನು ಮಿತ್ರ ರಾಷ್ಟ್ರವಾಗಿ ಅಲ್ಲಗಳೆಯುತ್ತದೆ ಎಂದೇನೂ ಅಲ್ಲ. ಈಗ ಚಾಲಕನ ಸೀಟಿನಲ್ಲಿ ಕೂತಿರುವುದು ಅಮೆರಿಕ. ಅದಕ್ಕೆ ಅನೇಕ ಆಯ್ಕೆಗಳಿವೆ. ಯಾರು ಮಿತ್ರರಾಗ

ಬಹುದು ಎಂಬ ನಿರ್ಧಾರ ಅಮೇರಿಕದ್ದೆ ಹೊರತು ಭಾರತದ್ದಲ್ಲ. ತನ್ನ ಅಗತ್ಯಗಳಿಗೆ ಅಮೇರಿಕ ಭಾರತವನ್ನು ಬಳಸಿಕೊಳ್ಳಬಹುದು, ಬಳಸಿಕೊಳ್ಳುತ್ತದೆ. ಇದು ಪರಸ್ಪರವಾಗಿರುವುದಿಲ್ಲ.

NMDಯೇ ಇದನ್ನು ಸ್ಪಷ್ಟಪಡಿಸುತ್ತದೆ. ಒಳಗೊಳ್ಳಲು ಭಾರತ ಬಯಸುತ್ತಿರುವುದೇ ಹೊರತು ಅಮೇರಿಕವಲ್ಲ. ಅಮೇರಿಕ ತನ್ನ ಶತ್ರುಗಳಲ್ಲಷ್ಟೇ ಅಲ್ಲ ಮಿತ್ರರಲ್ಲೂ ಭೀತಿಯುಂಟುಮಾಡಲು ಬಲಪ್ರಯೋಗ ಮಾಡಲು ಹೊರಟಿದೆ. ಇದು ಅಮೇರಿಕಾಕ್ಕೆ ಅಭ್ಯಾಸವಾಗಿಬಿಟ್ಟಿದೆ. ಇದೇ ಅಮೇರಿಕ ಜಪಾನು ಮತ್ತು ಯುರೋಪ್ NATO ಮಿತ್ರ ರಾಷ್ಟ್ರಗಳ NMD ಯೋಜನೆಗಳನ್ನು ಕಡೆಗಣಿಸಿತ್ತು, ಈಗ ಅದೇ ರಾಷ್ಟ್ರಗಳಿಂದ ಬೆಂಬಲ ಬಯಸುತ್ತದೆ. NMD ಯೋಜನೆಗೆ ಚಾಲನೆ ನೀಡಿ ಇತರ ದೇಶಗಳನ್ನು ತಾತ್ಸಾರ, ಅಸೂಯೆಗಳಿಂದ ನೋಡುತ್ತದೆ. ಇಂತಹ ದೇಶದೊಂದಿಗೆ ಭಾರತ ಸಮಾನ, ಸಮತೋಲನದ ಸಂಬಂಧವನ್ನು ನಿರೀಕ್ಷೆ ಮಾಡುತ್ತದೆ. ಅಮೇರಿಕದ ವಿದೇಶಿ ನೀತಿಯ ಚೌಕಟ್ಟಿನಲ್ಲಿ ಭಾರತಕ್ಕೆ ಪ್ರಾಮುಖ್ಯತೆಯೇ ಇಲ್ಲ. ಭಾರತಕ್ಕಿಂತ ಪ್ರಬಲವಾಗಿರುವ ರಷ್ಯಾ, ಚೈನಾ, ಜಪಾನ್, ಜರ್ಮನಿ, ಫ್ರಾನ್ಸ್, ಬ್ರಿಟನ್ ಕೂಡ ಮುಖ್ಯವಾಗುವುದಿಲ್ಲ. ಪೋಕ್ರಾನ್ 2ರ ನಂತರ ಭಾರತದ ವಿದೇಶಾಂಗ ನೀತಿಯಲ್ಲಿ ಅಮೇರಿಕ ಬಹುಮುಖ್ಯ ಅಂಶವಾಗಿಬಿಟ್ಟಿದೆ. ಜಾಗತಿಕ ಕ್ರಮಾಂಕದಲ್ಲಿ ನ್ಯೂಕ್ಲಿಯರ್ ರಾಷ್ಟ್ರವಾಗುವುದರಿಂದ ಸ್ವಾಯತ್ತತೆ, ಸಾರ್ವಭೌಮತ್ವವನ್ನು ಪಡೆಯಬಹುದೆಂದು ಭಾರತ ಭಾವಿಸಿದೆ.

**NMD ಮುಂಚಿನ ನ್ಯೂಕ್ಲಿಯರ್ ವ್ಯವಸ್ಥೆಗಿಂತ NMDಯುಕ್ತ ನ್ಯೂಕ್ಲಿಯರ್ ಯುಗ, ಭಾರತ ಸೇರಿದಂತೆ ಜಗತ್ತಿಗೆ ಉತ್ತಮವಲ್ಲವೆ? ಕ್ಷಿಪಣಿ, ಯುದ್ಧಾಸ್ತ್ರಗಳನ್ನು ಕಡಿಮೆ ಗೊಳಿಸುವುದಾಗಿ ಹೇಳಿದ ಅಮೇರಿಕದ ನಿಲುವು ಏನಾಯಿತು?**

ಮೇಲೆ ಹೇಳಿದ ಎಲ್ಲಾ ಕಾರಣಗಳಿಂದಾಗಿ NMD ಯೋಜನೆ ಇಡೀ ಜಗತ್ತಿನ ಪರಿಸ್ಥಿತಿಯನ್ನು ಹದಗೆಡಿಸುತ್ತದೆ ಎಂಬುದು ಸತ್ಯ. ನ್ಯೂಕ್ಲಿಯಾರ್ ಯುಗವು ನಾಶಪಡಿಸಿವುದರಲ್ಲಿ ಹಿಂದೆಂದಿಗಿಂತಲೂ ಹೆಚ್ಚು ಭೀಕರ, ಮಾರಕವಾದುದು. ಕೆಲವರು ಹೊಸ ನ್ಯೂಕ್ಲಿಯಾರ್ ಕ್ರಮಾಂಕದಲ್ಲಿ ಭಾರತಕ್ಕೆ ಸ್ಥಾನ ದೊರೆಯುವುದರಿಂದ NMDಯನ್ನು ಸಮರ್ಥಿಸಬೇಕೆಂದು ಭಾವಿಸುತ್ತಾರೆ. ಇದೊಂದು ಭಾರತ ಸರ್ಕಾರದ ಮೂರ್ಖ ಯೋಚನೆ. ಈಗಿರುವ ನ್ಯೂಕ್ಲಿಯರ್ ಕ್ಲಬ್ ಸಮಾನರ ಕ್ಲಬ್ ಅಲ್ಲ. ಅದರಲ್ಲಿ ಮೂರು ಹಂತದ ಸದಸ್ಯತ್ವವಿದೆ. ಮೊದಲ ದರ್ಜೆಯ ಸದಸ್ಯರೆಂದರೆ ಅಮೇರಿಕ ಮತ್ತು ರಷ್ಯಾ. ಎರಡನೆ ದರ್ಜೆಯ ಸದಸ್ಯರೆಂದರೆ ಚೈನಾ, ಫ್ರಾನ್ಸ್, ಬ್ರಿಟನ್ ಮೂರನೆ ದರ್ಜೆ ಬಯಸುವ ಸದಸ್ಯರನ್ನು ಅನೌಪಚಾರಿಕವಾಗಿ ಒಳಗೊಳ್ಳಲಾಗಿದೆ. ಅವೆಂದರೆ ಭಾರತ ಮತ್ತು ಪಾಕಿಸ್ತಾನ. ಕ್ಲಬ್ಬಿನ್ ಬೇಸ್‌ಮೆಂಟಿನಲ್ಲಿರುವ ಬಾಂಬ್‌ಗಳನ್ನು ನೋಡಿಕೊಳ್ಳಲು ಅಮೇರಿಕದಿಂದ ನೇಮಕಗೊಂಡಿರುವ ಸಿಬ್ಬಂದಿಯೇ ಇಸ್ರೇಲ್. ಇಸ್ರೇಲ್ ಇನ್ನು ಔಪಚಾರಿಕ ಅಥವಾ ಅನೌಪಚಾರಿಕ ಸದಸ್ಯನಾಗುವ ಆಸಕ್ತಿ ತೋರಿಸಿಲ್ಲ. ನ್ಯೂಕ್ಲಿಯರ್ ಆಟದಲ್ಲಿ ಭಾಗವಹಿಸುವ ನ್ಯೂಕ್ಲಿಯರ್ ಕಾರ್ಡನ್ನು ಇಸ್ರೇಲ್ ಹೊಂದಿದ್ದು, ಅದು ಆಟದಲ್ಲಿ ಭಾಗವಹಿಸಿ ಆಡದೆ ರಿಸರ್ವ್ ಆಗಿ ಕಾರ್ಡ್‌ನ್ನಿಟ್ಟುಕೊಂಡಿದೆ.

ಸದ್ಯದ ಈ ನ್ಯೂಕ್ಲಿಯರ್ ಕ್ಲಬ್‌ನ ಲಕ್ಷಣಗಳನ್ನೆ NMD ಬದಲಿಸಹೊರಟಿದೆ. ಬದಲಾಯಿಸುವುದರಿಂದ 3 ಅಥವಾ 4 ರೀತಿಯ ಸದಸ್ಯತ್ವವನ್ನು ನೀಡಬಹುದು. ಮೊದಲ ದರ್ಜೆಯನ್ನು ಅಮೇರಿಕ ಬಯಸಿದರೆ ಅಲ್ಲಿ ತನ್ನನ್ನು ಮಾತ್ರ ಸ್ಥಾಪಿಸಿ ರಷ್ಯಾವನ್ನು 2ನೇ ದರ್ಜೆಗೆ ಇಳಿಸಿ ಚೈನಾ, ಬ್ರಿಟನ್, ಫ್ರಾನ್ಸ್‌ಗೆ ಮೂರನೇ ದರ್ಜೆ ನೀಡಿ ಚೈನಾ 2ನೇ ದರ್ಜೆಗೆ ಏರಲು ಶ್ರಮ ಪಡುವಂತೆ ಮಾಡುವುದು. ಭಾರತ ಮತ್ತು ಪಾಕಿಸ್ತಾನಗಳನ್ನು ನ್ಯೂಕ್ಲಿಯರ್ ಕಾರ್ಡಿರುವ 4ನೆ ದರ್ಜೆಯಲ್ಲಿ ಉಳಿಸಿ ಹಿಂದೆಂದಿಗಿಂತಲೂ ದುರ್ಬಲವಾದ ಪರಿಸ್ಥಿತಿಗೆ ತಳ್ಳುವಂತಹ ಹೊಸ ನಿಯಮಗಳನ್ನು ತರಲು ಅಮೇರಿಕ ಉದ್ದೇಶಿಸಿದೆ.

NMD/TMD ಯಂತಹ ಯೋಜನೆಗೆ ಕೈಹಾಕಿ ಶಸ್ತ್ರಾಸ್ತ್ರಗಳನ್ನು ಕಡಿಮೆಗೊಳಿಸುವುದಾಗಿ ಅಮೇರಿಕ ಹೇಳುತ್ತಿರುವುದು ದೊಡ್ಡ ಸುಳ್ಳು. ಅಮೇರಿಕದ ಯುದ್ಧ ಯೋಜನಾಕಾರರ ನಂಬಿಕೆ ಏನೆಂದರೆ ಅಣ್ವಸ್ತ್ರಗಳನ್ನು ಅಳವಡಿಸಿ, ಗುರಿಯಾಗಿಡುವ ಯೋಜನೆಗೆ (ರಿಸರ್ವ್ ಆಗಿ ಇಟ್ಟುಕೊಂಡಿರುವ ಕೆಲವು ಸಾವಿರ Warheadsಗಳನ್ನು ಬಿಟ್ಟು) ಕನಿಷ್ಟ 2000 Warheadsಗಳ ಅಗತ್ಯವಿದೆ. ಭೂಮಿಯನ್ನು ಹಲವಾರು ಬಾರಿ ಸುಟ್ಟರೂ ಮುಗಿಯುವುದಿಲ್ಲ! ರಷ್ಯಾ 1,500 ಯುದ್ಧಾಸ್ತ್ರಗಳವರೆಗೆ ಕಡಿಮೆ ಮಾಡಿಕೊಳ್ಳ ಬಯಸಿದೆ. ಇವನ್ನು ಕಡಿಮೆ ಮಾಡಿಕೊಳ್ಳುವುದು ಖಚಿತವಾಗಿಲ್ಲ. ಕಡಿಮೆ ಮಾಡಿಕೊಂಡರೂ ಈಗಾಗಲೇ ಇರುವ ಯುದ್ಧಾಸ್ತ್ರಗಳೊಂದಿಗೆ ಹೆಚ್ಚು ಪರಿಣಾಮಕಾರಿಯಾದ ಅಸ್ತ್ರಗಳನ್ನು ತಯಾರಿಸಿ ರಕ್ಷಾಕವಚದೊಳಗೆ ಬಳಸಿಕೊಳ್ಳುವುದು ಹೆಚ್ಚಿನ ಆತಂಕಕ್ಕೆ ಕಾರಣವಾಗುತ್ತದೆ.

**NMD/TMDಗಳು ಭಾರತ ಮತ್ತು ದಕ್ಷಿಣ ಏಷಿಯಾಕ್ಕೆ ರಕ್ಷಣೆ ನೀಡಬಲ್ಲವೆ?**

NMDಯು ಅಮೇರಿಕಾಕ್ಕಷ್ಟೇ ಸೀಮಿತ. ಅಮೇರಿಕ

ದ.ಏಶಿಯಾಕ್ಕೆಂದು ಯಾವ ಯೋಜನೆಯನ್ನು ಹಮ್ಮಿಕೊಂಡಿಲ್ಲ. ಯೋಚಿಸುವುದಾದರು ಏಕೆ? ಭಾರತದ ಆಶಯಕ್ಕೆ ತಕ್ಕಂತೆ ಅಮೆರಿಕ ಪಾಕಿಸ್ತಾನವನ್ನು ನ್ಯೂಕ್ಲಿಯರ್ ವೈರಿ ಎಂದು ಪರಿಗಣಿಸುವುದಿಲ್ಲ. ದ.ಏಶಿಯಾಕ್ಕೆಂದು TMD ಯೋಜನೆಯನ್ನು ಯೋಚಿಸಿದರೂ ಅದನ್ನು ನಾಶಗೊಳಿಸಲು ಹಲವಾರು ವಿಧಾನಗಳಿವೆ. ಭಾರತ ಮತ್ತು ಪಾಕಿಸ್ತಾನದ ಪರಸ್ಪರ ಆಕ್ರಮಣದ ಅಗತ್ಯ ಪೂರೈಸುವ ಕಡಿಮೆ ಅಂತರ, ಕಡಿಮೆ ಎತ್ತರದಲ್ಲೂ ಬಳಸುವ ಟ್ರಾಜೆಕ್ಟರಿ ಕ್ಷಿಪಣಿಗಳ (ಗಾಳಿಯಲ್ಲಿ ಡೊಂಕಿನ ಪಥ ಸೃಷ್ಟಿಸುವ ಕ್ಷಿಪಣಿಗಳು) ಎದುರಿನಲ್ಲಿ TMD ಯೋಜನೆ ಪರಿಣಾಮಕಾರಿಯಾಗುವುದಿಲ್ಲ. ವಿಮಾನಗಳ ಮೂಲಕ ಹಾರಿಸುವ ಬಾಂಬುಗಳಿಗೂ TMD ಪರಿಣಾಮಕಾರಿಯಾಗುವುದಿಲ್ಲ. ಇಂತಹ ಸಂದರ್ಭದಲ್ಲಿ ಘಾಮೂಲಿ ಯುದ್ಧ ವಿಮಾನಗಳನ್ನು ಬಳಸಬೇಕಾಗಬಹುದು. ಈ ವಿಮಾನಗಳು ಬೇರೆ ವಿಮಾನಗಳಲ್ಲಿ ಅಣ್ವಸ್ತ್ರವಿದೆಯೇ ಇಲ್ಲವೆ ಎಂಬುದನ್ನು ಗುರುತಿಸಲಾರವು. ಅಣ್ವಸ್ತ್ರವುಳ್ಳ ವಿಮಾನವನ್ನು ಹೊಡೆದರೂ, ಉರುಳಿಸಿದರೂ ಬೀಳುವ ಮೊದಲು ಇಲ್ಲ ಡಿಕ್ಕಿ ಹೊಡೆಯುವ ಮೊದಲು ಅಣ್ವಸ್ತ್ರಗಳನ್ನು ಬಿಡುಗಡೆ ಮಾಡಬಹುದು. ಒಟ್ಟಿನಲ್ಲಿ TMDಯು ಭಾರತ, ಪಾಕಿಸ್ತಾನ ಪರಸ್ಪರ ನ್ಯೂಕ್ಲಿಯರ್ ಆಕ್ರಮಣ ಮಾಡಿದಲ್ಲಿ ಯಾವ ರಕ್ಷಾ ಕವಚವನ್ನು ನೀಡಲಾರದು.

**ಭಾರತ ಬೇರೆ ರೀತಿಯ ನಿಲುವು ತೆಗೆದುಕೊಳ್ಳಬಹುದಿತ್ತೆ?**

ಖಂಡಿತಾ ಸಾಧ್ಯವಿತ್ತು. ಮೊತ್ತ ಮೊದಲನೆಯದಾಗಿ NMD/TMD ಯೋಜನೆಗಳನ್ನು ಖಡಾಖಂಡಿತವಾಗಿ ವಿರೋಧಿಸ ಬಹುದಿತ್ತು. ಈ ಯೋಜನೆಗಳನ್ನು ವಿರೋಧಿಸುತ್ತಿರುವ ಸರ್ಕಾರಗಳು, ಸಂಘಟನೆಗಳನ್ನು (ಅಮೆರಿಕ ಸೇರಿದಂತೆ) ಬೆಂಬಲಿಸಬಹುದಿತ್ತು. ಈ ರೀತಿಯ ಪ್ರಯತ್ನಗಳಷ್ಟೇ ಸಂಪೂರ್ಣ ನಿಶ್ಶಸ್ತ್ರೀಕರಣಕ್ಕೆ ಎಡೆಮಾಡಿಕೊಡಬಲ್ಲದು. NMDಯಂತಹ ಯೋಜನೆಗಳನ್ನು ಅನಿವಾರ್ಯವೆಂದುಕೊಳ್ಳುವುದೇ ಅದರ ನಿರ್ಮಾಣಕ್ಕೆ ಕಾರಣವಾಗುತ್ತವೆ. ಆ ಯೋಜನೆಗಳನ್ನು ವಿರೋಧಿಸುತ್ತಿರುವ ಹೋರಾಟಕ್ಕೆ ಮುಳುವಾಗುತ್ತದೆ. ಈ ಯೋಜನೆಗಳನ್ನು ಒಪ್ಪಿಕೊಳ್ಳುವುದು ಅನೈತಿಕ, ಸಿದ್ಧಾಂತ ರಹಿತ ರಾಜಕೀಯ ನಡತೆಯನ್ನು ಸಮರ್ಥಿಸುವುದಲ್ಲದೆ, ಸಾರ್ವಜನಿಕರನ್ನು ಹಾದಿ ತಪ್ಪಿಸಿ, ತಪ್ಪನ್ನೇ ನ್ಯಾಯಬದ್ಧ ಗೊಳಿಸುತ್ತವೆ.

ಅಮೆರಿಕದೊಂದಿಗೆ ಉತ್ತಮ ಸಂಬಂಧವಿಟ್ಟುಕೊಂಡೂ ತನ್ನದೇ ತಾತ್ವಿಕ ನಿಲುವಿಗೆ ಬದ್ಧವಾಗಿ, ಯಾವ ರಾಜಿಗೂ ಒಳಗಾಗದೆ ಅಮೆರಿಕದ ಯೋಜನೆಯನ್ನು ವಿರೋಧಿಸುವ ದೇಶಗಳೂ ಇವೆ. ಈ ದೇಶಗಳಿಗೆ ಅಮೆರಿಕ ತಪ್ಪು ತಿಳಿಯ ಬಹುದು, ಶಿಕ್ಷಿಸಬಹುದೆಂಬ ಭಯವಿಲ್ಲ. ತಮಗೆ ಬೆಂಬಲ ಸೂಚಿಸಲಿಲ್ಲವೆಂಬ ಅಸಮಾಧಾನಕ್ಕೆ ಅಮೆರಿಕ ದಂಡವನ್ನೇನೂ ವಿಧಿಸುವುದಿಲ್ಲ. ಉದಾಹರಣೆಗೆ, ಸ್ವೀಡನ್, ಬ್ರೆಜಿಲ್, ದ.ಆಫ್ರಿಕ ಮತ್ತು ಈಜಿಪ್ಟ್ ದೇಶಗಳು ನಿಶ್ಶಸ್ತ್ರೀಕರಣಕ್ಕಾಗಿ ನಡೆಯುತ್ತಿರುವ ಹೋರಾಟದಲ್ಲಿ ಭಾಗಿಯಾಗಿವೆ. ಈ ದೇಶಗಳಿಗೆ ಅಮೆರಿಕ ದೊಂದಿಗೆ ಉತ್ತಮ ಸಂಬಂಧವಿದ್ದರೂ NMD/TMDಯನ್ನು ವಿರೋಧಿಸುತ್ತವೆ. ಅಮೆರಿಕದ ಭೀತಿಯಿಲ್ಲದೆ ನ್ಯೂಕ್ಲಿಯರ್ ವಿಷಯಗಳ ಬಗ್ಗೆ ತಮ್ಮದೆ ಸ್ವತಂತ್ರ ನಿಲುವು ಹೊಂದಿವೆ. ಅಮೆರಿಕ ಮತ್ತಿತರ ನ್ಯೂಕ್ಲಿಯರ್ ದೇಶಗಳಿಗೆ (ಭಾರತ ಸೇರಿದಂತೆ) ಅಂತರ ರಾಷ್ಟ್ರೀಯ ಸಾರ್ವಜನಿಕ ಅಭಿಪ್ರಾಯವು (ಆ ದೇಶಗಳ ಜನರೂ ಸೇರಿ) ಇರುಸು ಮುರುಸಿನದು ಮತ್ತು ಅಣ್ವಸ್ತ್ರವಿಲ್ಲದ ದೇಶಗಳನ್ನು ಬೆದರಿಸಲು ಕಷ್ಟಸಾಧ್ಯವಾಗಿಸುತ್ತದೆ.

ಮೇಲೆ ಹೇಳಿದ ದೇಶಗಳು ಅಣ್ವಸ್ತ್ರಗಳನ್ನು ತಯಾರಿಸುವ ಸಾಮರ್ಥ್ಯವಿದ್ದರೂ ಅಣ್ವಸ್ತ್ರಗಳನ್ನು ತಿರಸ್ಕರಿಸಿವೆ. (ಈಜಿಪ್ಟ್ ದೇಶ ಅರಬ್ ರಾಷ್ಟ್ರಗಳಲ್ಲೆ ತಾಂತ್ರಿಕವಾಗಿ, ವೈಜ್ಞಾನಿಕವಾಗಿ ಮುಂದುವರೆದಿರುವ ದೇಶ) ನ್ಯೂಕ್ಲಿಯರ್ ರಾಷ್ಟ್ರಗಳ ಆಶಯವನ್ನು ತಿರಸ್ಕರಿಸಿವೆ. ಅಣ್ವಸ್ತ್ರಗಳನ್ನಿಟ್ಟುಕೊಳ್ಳದೆಯೇ ಅಣ್ವಸ್ತ್ರ ರಾಷ್ಟ್ರಗಳ ಆಶಯವನ್ನು ತಿರಸ್ಕರಿಸಿರುವುದು ಆ ದೇಶಗಳಿಗೆ ಹೆಚ್ಚಿನ ಭದ್ರತೆ ನೀಡಿದೆ.

ಮೇ 1998ರಲ್ಲಿ ನ್ಯೂಕ್ಲಿಯರ್ ಅಸ್ತ್ರಗಳನ್ನು ತಯಾರಿಸುವ ಮೂಲಕ ಭಾರತ ತನಗಷ್ಟೇ ಅಲ್ಲ ದಕ್ಷಿಣ ಏಷಿಯಾ ವಲಯಕ್ಕೆ ಅಭದ್ರತೆ ತಂದಿದೆ. ಅಪಾಯಕಾರಿ ಅಣ್ವಸ್ತ್ರ ಪೈಪೋಟಿಗೆ ಕಾರಣವಾಗಿದೆ. ಈ ಬೆಳವಣಿಗೆ ತನ್ನನ್ನೆ ನಿಯಂತ್ರಿಸಿಕೊಳ್ಳ ಲಾರದಂತೆ ಮಾಡಿ, ಸ್ವತಂತ್ರವಾಗಿ ವರ್ತಿಸಲು ಅಡ್ಡಿಯಾಗುತ್ತದೆ. ಭಾರತ NMDಯನ್ನು ಒಪ್ಪಿಕೊಳ್ಳುವ ಮೂಲಕ ನ್ಯೂಕ್ಲಿಯರ್ ಎಸ್ಕಲೇಟರ್ ಹತ್ತಿ ತಾನು ಮುಟ್ಟಬೇಕೆಂದಿರುವ ಜಾಗ ತಲುಪಿಬಿಡುತ್ತೇನೆಂಬ ಭ್ರಮೆಯನ್ನು ಹುಟ್ಟುಹಾಕುತ್ತಿದೆ. ನ್ಯೂಕ್ಲಿಯರ್ ಶಕ್ತಿಯಾಗಬೇಕೆಂಬ ಹುಚ್ಚು ಬಿಟ್ಟು ಅಣ್ವಸ್ತ್ರಗಳ ಸಂಪೂರ್ಣ ನಿರ್ಮೂಲನೆಯ ಮೂಲಕ ಭಾರತವಷ್ಟೇ ಅಲ್ಲ ಇಡೀ ಜಗತ್ತನ್ನು ಸುರಕ್ಷಿತವಾಗಿಡಲು ನಡೆಯುತ್ತಿರುವ ಹೋರಾಟವನ್ನು ಬಲಪಡಿಸಬೇಕು. ❑

*ಅಚಿನ್ ವಿನಾಯಕ್*

*ಕನ್ನಡಕ್ಕೆ : ಸರಸ್ವತಿ ಮು.*

# ನಾನು ಅಣುಬಾಂಬ್

ನಾನು ಅಣುಬಾಂಬ್
ನಾ ಕಾಣುವುದಿಲ್ಲ ಕೇಳುವುದಿಲ್ಲ
ಒಳ್ಳೆಯದಲ್ಲ ಕೆಟ್ಟದ್ದಲ್ಲ
ಸುಖಿಯೂ ಅಲ್ಲ, ದುಃಖಿ ಎಂದೂ ಅಲ್ಲ
ಪ್ರೀತಿಸುವುದಿಲ್ಲ, ದ್ವೇಷಿಸುವುದಿಲ್ಲ
ರೂಪವಿಲ್ಲ
ನಾಚುವುದಿಲ್ಲ, ಭಯಪಡುವುದೇ ಇಲ್ಲ
ನಾನು ಅಣುಬಾಂಬ್

ಅಣಬೆಯಂತಹ ಮೋಡವನ್ನಷ್ಟೇ ನೀವು ಬಲ್ಲಿರಿ
ನಾನದಷ್ಟೇ ಅಲ್ಲ ಅದಕ್ಕಿಂತ ಹೆಚ್ಚು
ತಾರಕ ಮೌನ ನಾನು
ನನ್ನ ಬಗ್ಗೆ ಮಾತಾಡುವುದನ್ನು ನಾ ಸಹಿಸೆ
ಪ್ರಶ್ನಿಸುವುದನ್ನು ಸಹಿಸೆ
ನನ್ನ ಅರಿಯುವ ಪ್ರಯತ್ನ ಬೇಡ
ನಾ ಬದುಕುವುದು ನಿಗೂಢ ಕತ್ತಲೊಳಗೆ
ಯಾಕೆಂದರೆ ನಾನೇ ರಾಷ್ಟ್ರೀಯ ಭದ್ರತೆ
ನನಗೆ ಮೊದಲ ಆದ್ಯತೆ
ನಾನು ಅಣುಬಾಂಬ್

ನಾ ಎಣಿಸುವುದು ಒಂದು .... ಎರಡೆಂದಲ್ಲ
ನನ್ನ ಎಣಿಕೆ ಲಕ್ಷ ಲಕ್ಷದ್ದು
ಯಾರೆಂದು ಅರಿಸುವುದಿಲ್ಲ
ಖಚಿತವಾಗಿ ಇಂತಹವರೇ ಆಗಬೇಕೆನ್ನುವುದು ನನ್ನ ಶೈಲಿಯಲ್ಲ
ಗುರಿ ಎಡೆಗೇ ಧಾವಿಸುವ ಬಾಣ ನಾನಲ್ಲ
ಲಕ್ಷ ಸಮಾಧಿಗಳ ಮಸಣ ನನಗಿಷ್ಟ
ನನ್ನ ಗುರಿಗೆ ಇಂತಹವರೇ ಆಗಬೇಕೆಂದೇನೂ ಇಲ್ಲ
ನೂರು ಸಾವಿರ ನನ್ನ ಲೆಕ್ಕಕ್ಕಿಲ್ಲ
ಹೆಸರು, ಬೀದಿ, ಗಲ್ಲಿಗಳ ವಿಳಾಸ ನನಗೆ ಬೇಕಿಲ್ಲ
ಸಂಕೇತಗಳಷ್ಟೇ ನನಗೆ ಸಾಕು.

ರಾಜಕಾರಣಿಗಳು ನನ್ನ ಅಧೀನರು
ಮಾರುಕಟ್ಟೆಗಳು ನನ್ನ ಅಗತ್ಯ ಬಲ್ಲವು
ನಾನು ತೊಡುವುದು ಕೆಂಪು, ಕೇಸರಿ, ಹಸಿರಿನ ಧಿರಿಸು
ಭ್ರಮೆ ನನ್ನ ಆಪ್ತಮಿತ್ರ
ನನ್ನ ಸಂದೇಶ ಒಯ್ಯಲುಂಟು ಶಿವನ ಸೈನಿಕರು
ಉದ್ರೇಕಗೊಂಡು ನಿಜವಾದ ಪುರುಷರೆಂದುಕೊಳ್ಳುವರು
ಅವರ ಭಾವೋದ್ರೇಕ ನನಗೆ ಬಲು ಮೆಚ್ಚು
ರಾಷ್ಟ್ರೋನ್ಮಾದ, ರಾಷ್ಟ್ರ ಪ್ರತಿಷ್ಠೆ ನನಗಿಷ್ಟ
ಉತ್ಪ್ರೇಕ್ಷೆಗಳು ಬಲುಪ್ರಿಯ
ನನಗಾಗಿ ಏನು ಮಾಡಲು ಸಿದ್ಧರಿವರು

ಜೀವ ವಿರೋಧಿ ನಾನು
ಅದರಿವರಿಗೆ ನಾನೇ ಭದ್ರತೆ
ನಾನು ವಿಜ್ಞಾನ, ತಂತ್ರಜ್ಞಾನ ಆದರೂ
ನಿಮಗಿರಬೇಕು ನನ್ನಲ್ಲಿ ನಿಷ್ಠೆ, ನಂಬಿಕೆ

ನಾನೇ ದೇವರು ನಾನೇ ದೊರೆ
ನಿಮ್ಮ ಯೋಜನೆ ನನ್ನ ಮುಷ್ಠಿಯಲ್ಲಿ
ನಾನು ಮಧ್ಯಮ ವರ್ಗದವರ ಸ್ವಭಾವ
ನಾನು ರಾಷ್ಟ್ರೀಯ ಭ್ರಾಂತಿ!
ಏಕೆಂದರೆ ನಾನು ಅಣುಬಾಂಬ್

ನಿಶ್ಚಲವಾಗಿ ನಿದ್ರಿಸು ಮಾನವತೆಯೆ
ನೀ ಹಾಗಿರುವುದು ನನಗಿಷ್ಟ
ಗೊಂದಲಗೊಂಡವರು ನನಗಿಷ್ಟ
ಅವರು ನನ್ನ ವಿರುದ್ಧ ಸೊಲ್ಲೆತ್ತರು
ಅನುಮಾನಗೊಂಡವರೂ ನನಗಿಷ್ಟ
ಸಾವಿರ ಸಾವುಗಳ ಎದುರಿನಲ್ಲೂ ಅವರು ಮೂಕರು
ದನಿ ಎತ್ತಲು, ನಿಯಮ ಮುರಿಯಲು
ಕಸಿವಿಸಿ ಪಡುವವರೆಂದರೆ ನನಗೆ ಖುಷಿ
ರಾಜಕೀಯವೆಂದರೆ ಆಗದ ಜನ
ನನಗೊಪ್ಪುವರು
ವಿದೇಶಿ ಬಾಂಬಿಗೆ ಬೆದರಿ
ಅವರವರೇ ದ್ವೇಷಿಸಿದರೂ
ನನ್ನನ್ನು ಪ್ರೀತಿಸುವರು

ಕಮಾನ್

# ದನಿ ಎತ್ತಿದ ಫೆಸಿಫಿಕ್ ಮಹಿಳೆಯರು

*'Pacific women speak out - ಎಂಬ ಪುಸ್ತಕವು ತಮ್ಮ ಬದುಕಿನ, ನೆಲೆಗಳ ಉಳಿವಿಗಾಗಿ ನಡೆಸುತ್ತಿರುವ ಹೋರಾಟದ ಕತೆಗಳ ಸಂಕಲನ. ಭೂಮಿಯನ್ನು ಅಣ್ವಸ್ತ್ರಗಳಿಂದ, ಅಣುಶಕ್ತಿಯ ಮಾರಕ ಪರಿಣಾಮಗಳಿಂದ, ಪರಿಸರ ನಾಶ ಮತ್ತು ಮಿಲಿಟರೀಕರಣದಿಂದ ಮುಕ್ತಗೊಳಿಸುವುದು ಹೋರಾಟದ ಉದ್ದೇಶ.*

*ಭೂಮಿಯ ಅರ್ಧ ಭಾಗವನ್ನು ಆವರಿಸುವ ಫೆಸಿಫಿಕ್ ಸಾಗರವು 32 ದೇಶಗಳು ಹಾಗೂ ಇನ್ನಿತರ ದೇಶಗಳಿಗೆ ನೆಲೆಯಾಗಿದೆ. ಯುದ್ಧ, ಆಕ್ರಮಣ, ಅಣ್ವಸ್ತ್ರಗಳ ಪರೀಕ್ಷೆ, ಅಣ್ವಸ್ತ್ರಗಳ ಉಗ್ರಾಣ, ಮಿಲಿಟರೀಕರಣ, ಮಾನವ ಹಕ್ಕುಗಳ ಉಲ್ಲಂಘನೆ, ಲೈಂಗಿಕ ಶೋಷಣೆ, ಪ್ರವಾಸೋದ್ಯಮ, ಗಣಿಗಾರಿಕೆ, ಕೈಗಾರಿಕೀಕರಣ, ಒತ್ತಾಯದ ಆರ್ಥಿಕ ಅವಲಂಬನೆ, ಸ್ಥಳೀಯರನ್ನು ಮೂಲೆಗುಂಪು ಮಾಡಿ ನೆಲೆಗೊಂಡಿರುವ ಹೊರಗಿನವರು ಹೀಗೆ ವಸಾಹತುಶಾಹಿ ಹುಟ್ಟುಹಾಕಿರುವ ಎಲ್ಲಾ ಸಮಸ್ಯೆಗಳು ಅಲ್ಲಿ ತಾಂಡವವಾಡುತ್ತಿವೆ.*

*ಅನ್ಯಾಯ, ಹಿಂಸೆ, ದಬ್ಬಾಳಿಕೆಗಳ ವಿರುದ್ಧ ಹೋರಾಡುತ್ತಿರುವ ಮಹಿಳೆಯರ ಅನುಭವಗಳನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಪ್ರಕಟಿಸಲಾಗಿದೆ. ಅವರ ಮೇಲಾಗುತ್ತಿರುವ ಹಿಂಸೆಯನ್ನು ಮೆಟ್ಟಿ ನಿಂತ ಈ ಮಹಿಳೆಯರ ಅಗಾಧ ಚೈತನ್ಯದ ಸೆಲೆಗೆ ಮೂಲಾಧಾರ - ಆ ನೆಲದ ಜನರಿಗೆ ಆದಿಯಿಂದಲೂ ಭೂಮಿ, ನೀರಿನೊಂದಿಗಿರುವ ಅನನ್ಯ ಸಂಬಂಧ. ಅನ್ಯಾಯಗಳನ್ನು, ಒಳಗೆ ಸುತ್ತಿಕೊಂಡಿದ್ದ ಮೌನವನ್ನು ಮುರಿಯುವ ಸಲುವಾಗಿ ತಮ್ಮ ಕಥೆಗಳನ್ನು ದಾಖಲಿಸಿದ್ದಾರೆ. ಫೆಸಿಫಿಕ್ ದ್ವೀಪಗಳಲ್ಲಿ ನಡೆಯುತ್ತಿರುವುದೇನೆಂದು ಜಗತ್ತಿನಾದ್ಯಂತ ಎಲ್ಲರಿಗೂ ತಿಳಿಯಲಿ, ಅವರು ಹೋರಾಟವನ್ನು ಬೆಂಬಲಿಸಲೆಂದು ಆ ಮಹಿಳೆಯರು ಬಯಸುತ್ತಾರೆ. ತಮ್ಮ ದ್ವೀಪಗಳನ್ನು ವರ್ಣಭೇದದ ದಳ್ಳುರಿಯಿಂದ ಮುಕ್ತಿಗೊಳಿಸಿ, ತಮ್ಮ ಜನ್ಮಸಿದ್ಧ ಹಕ್ಕುಗಳನ್ನು ಪಡೆಯುವ ಪಣತೊಟ್ಟಿದ್ದಾರೆ. ಫೆಸಿಫಿಕ್ ದ್ವೀಪಗಳು ವಸಾಹತುಶಾಹಿಯ ಹಿಡಿತದಿಂದ ಬಿಡುಗಡೆ ಪಡೆಯದೆ ಮಿಲಿಟರೀಕರಣದಿಂದ ಪಾರಾಗಲು ಸಾಧ್ಯವಿಲ್ಲ. ಫೆಸಿಫಿಕ್ ದ್ವೀಪಗಳು ಮಿಲಿಟರೀಕರಣದಿಂದ ಪಾರಾಗದಿದ್ದರೆ ನಾವೆಲ್ಲರೂ ಭಾರಿ ಬೆಲೆ ತೆರಬೇಕಾಗುತ್ತದೆ.*

*ಪುಸ್ತಕದಲ್ಲಿ ಪ್ರಕಟವಾಗಿರುವ ಅನುಭವವೊಂದನ್ನು ಅನುವಾದಿಸಿ ಮಾನಸದ ಈ ಸಂಚಿಕೆಯಲ್ಲಿ ಪ್ರಕಟಿಸಿದ್ದೇವೆ. ಉಳಿದ ಅನುಭವ ಕಥನಗಳನ್ನು ಮುಂಬರುವ ಸಂಚಿಕೆಗಳಲ್ಲಿ ಪ್ರಕಟಿಸಲಾಗುವುದು.*

## ಜಗತ್ತಿನ ಮೊದಲ ಅಣುಮುಕ್ತಿ ಸಂವಿಧಾನ
## ಇಸಬೆಲ್ಲಾ ಸುಮಂಗ್-ಬೆಲಾವ್ (ಪಲಾವ್) ದ್ವೀಪ


**ಇಸಬೆಲ್ಲಾ ಸುಮಂಗ್**

ಇಸಬೆಲ್ಲಾ ಸುಮಂಗ್ ಸಂವಿಧಾನವನ್ನು ಉಳಿಸಿಕೊಳ್ಳಲು ವ್ಯಾಪಕ ಪ್ರಚಾರ ಮಾಡಿದರು. ಸರ್ಕಾರ ಮತ್ತು ಅಮೆರಿಕದ ವಿರುದ್ಧ ನಡೆಸಿದ ಕಾನೂನಿನ ಹೋರಾಟದಲ್ಲಿ ಬಹು ಮುಖ್ಯ ಪಾತ್ರವಹಿಸಿದರು. ಅಂತರರಾಷ್ಟ್ರೀಯ ಸಂವಿಧಾನ ತಜ್ಞರೊಂದಿಗೆ ಅಮೆರಿಕದ ಕಾಂಗ್ರೆಸ್‌ನವರೊಂದಿಗೆ ಎಡಬಿಡದೆ ಚರ್ಚಿಸಿದರು. ತನ್ನ ಜನರನ್ನು ಮಿಲಿಟರಿ ಆಕ್ರಮಣದಿಂದ ರಕ್ಷಿಸಲು ಈಗಲೂ ಹೋರಾಡುತ್ತಿದ್ದಾರೆ. ಅವರ ಅನುಭವ ಕಥನವಿದು.

1979 ರಲ್ಲಿ ನಮ್ಮ ದೇಶವು ಮೊತ್ತ ಮೊದಲ ಅಣುಮುಕ್ತ ಸಂವಿಧಾನವನು ಸ್ಥಾಪಿಸಿತು. ಅಂದಿನಿಂದಲೂ ನಾವು, ನಮ್ಮ ದ್ವೀಪವನ್ನು ವಸಾಹತುವನ್ನಾಗಿ ಮಾಡಿಕೊಂಡು, ಅಲ್ಲಿ ಮಿಲಿಟರಿ ನೆಲೆ ಸ್ಥಾಪಿಸಬೇಕೆಂಬ ಅಮೆರಿಕಾ ಸರ್ಕಾರದ ದುರುದ್ದೇಶದ ವಿರುದ್ಧ ಹೋರಾಡುತ್ತಿದ್ದೇವೆ. 1946 ರಲ್ಲಿ ಯು.ಎನ್. ಅಮೆರಿಕಾವನ್ನು ನಮ್ಮ ದ್ವೀಪದ ಆಡಳಿತಗಾರರನ್ನಾಗಿ ಮಾಡಿದಾಗಿನಿಂದಲೂ ನಾವು ಅವರ ಹಿಡಿತಕ್ಕೊಳಪಟ್ಟಿದ್ದೇವೆ. ಪಲಾವು ದ್ವೀಪವನ್ನು ಸ್ವಾತಂತ್ರ್ಯಗೊಳಿಸುವುದು ಸಂಯುಕ್ತ ರಾಷ್ಟ್ರಗಳ ಒಕ್ಕೂಟಕ್ಕೆ ಅನಿವಾರ್ಯವಾಗಿತ್ತು. ವಿದ್ಯುತ್‌ಚ್ಛಕ್ತಿ, ಶಾಲೆ, ಆಸ್ಪತ್ರೆಗಳಂತಹ ಮೂಲಭೂತ ಸೌಕರ್ಯಗಳನ್ನು ಒದಗಿಸುವ ಜವಾಬ್ದಾರಿಯನ್ನು ಕಡೆಗಣಿಸಲಾಯ್ತು. ರಾಜಧಾನಿ ಕೊರಾಲ್‌ನಲ್ಲಿ ಮಾತ್ರ ನೀರು ವಿದ್ಯುತ್‌ಚ್ಛಕ್ತಿಯ ವ್ಯವಸ್ಥೆಯಿದೆ. ಅಂಗೌರ್ ಮತ್ತು ಪೆಲಿಲೂ ದ್ವೀಪಗಳಲ್ಲಿ 2ನೇ ಮಹಾಯುದ್ಧಕ್ಕಾಗಿ ಕಟ್ಟಿದ ರಸ್ತೆಗಳು, ವಿಮಾನಗಳ ಹಾರಾಟಕ್ಕೆ ಅನುಕೂಲವಾಗುವ ರನ್‌ವೇಗಳಿವೆ.

1960 ರಲ್ಲಿ ಅಮೆರಿಕಾಧ್ಯಕ್ಷ ಕೆನಡಿಯವರು, ಪಲಾವು ಮತ್ತು ಇತರ ದೇಶಗಳನ್ನು ಹೇಗೆ ಹಿಡಿತದಲ್ಲಿಟ್ಟುಕೊಳ್ಳಬೇಕೆಂದು ತಿಳಿದುಕೊಳ್ಳಲು ತಂಡವೊಂದನ್ನು ಮೈಕ್ರೊನೇಸಿಯಾ ದ್ವೀಪಗಳಿಗೆ ಕಳಿಸಿದರು. ಆ ತಂಡವು ಸ್ಥಳೀಯರು ತಮ್ಮ ಬೆಳೆಯನ್ನು ತಾವೆ ಬೆಳೆದುಕೊಳ್ಳಬಲ್ಲರು, ತೆಂಗು, ಮೀನು ಬೇಸಾಯವನ್ನು

ಅವಲಂಬಿಸಿರುವ ಅವರು ಸ್ವಾವಲಂಬಿಗಳು ಎಂದು ವರದಿ ನೀಡಿತು. ಅವರ ಸ್ವಾವಲಂಬನೆಯನ್ನು ನಾಶಮಾಡಲು ಅವರಿಗೆ ಹಣ ನೀಡಿ, ಹೆಚ್ಚಲ್ಲ, ಅವರ ಹಸಿವನ್ನು ಮುಚ್ಚುವಷ್ಟು, ಸ್ವಾತಂತ್ರ್ಯಕ್ಕೆ ಹೆದರಿಕೊಳ್ಳುವಷ್ಟು ಎಂಬ ಸಲಹೆಯನ್ನು ತಂಡವು ನೀಡಿತು.

ನಮ್ಮ ದ್ವೀಪಗಳನ್ನು ಕಂಡುಹಿಡಿದ ಸ್ಪೇನ್, ಖರೀದಿಸಿದ ಜರ್ಮನ್ ಹಾಗೂ ಗೆದ್ದುಕೊಂಡ ಜಪಾನ್ ವಸಾಹತು ಶಾಹಿಗಳಿಂತ ಭಿನ್ನವಾದ ಅಮೆರಿಕಾ ವಸಾಹತುಶಾಹಿ ನಮ್ಮ ಜನರದ್ದೇ ಇಚ್ಛೆ ಎಂಬ ಭ್ರಮೆಯನ್ನು ಹುಟ್ಟುಹಾಕಿ ಅತಿ ಯುಕ್ತಿಯಿಂದ ನಮ್ಮನ್ನು ವಿಭಾಯಿಸಬೇಕಾಗಿತ್ತು.

1979 ರಲ್ಲಿ 92% ಜನರು ಸಂವಿಧಾನ ಪರ ಮತ ಚಲಾಯಿಸಿದರು. ಆ ಸಂವಿಧಾನದಲ್ಲಿ ಅಣ್ವಸ್ತ್ರಗಳನ್ನು ದ್ವೀಪಕ್ಕೆ ತರಬೇಕಾದರೆ 75% ಜನರ ಒಪ್ಪಿಗೆ ಇರತಕ್ಕದ್ದು ಎಂಬ ಪರಿಚ್ಛೇದವಿದೆ (clause). ನಮಗೆ ಅಣುಶಕ್ತಿ, ಅಣ್ವಸ್ತ್ರವಾಗಲಿ ಬೇಡವಾಗಿತ್ತು. ಮಾರ್ಷಲೀಸ್ ಮಕ್ಕಳು ಊನಗೊಂಡು ಹುಟ್ಟುತ್ತವೆ ಎಂಬುದು ನಮಗೆ ತಿಳಿದಿತ್ತು. ಎರಡನೆ ಮಹಾಯುದ್ಧದ ಅನುಭವದೊಂದಿಗೆ ನಾವು ಬದುಕಿದ್ದೆವು. ಆ ಕಾರಣಕ್ಕಾಗಿಯೇ ಅಣ್ವಸ್ತ್ರ ಯುದ್ಧವು ನಮ್ಮ ದ್ವೀಪದಲ್ಲಿ ಬೇಡವೆನ್ನುತ್ತೇವೆ. ನಮ್ಮ ಭವಿಷ್ಯವನ್ನು ಆಯ್ಕೆ ಮಾಡಿಕೊಳ್ಳುವ ಹಕ್ಕು ನಮಗಿರಬೇಕೆಂಬುದು ನಮ್ಮ ನಂಬಿಕೆ. ಅಮೆರಿಕ ಕೂಡಲೆ ಹೇಳಿತು."ಇದು ನಮ್ಮ ಯೋಜನೆಗಳಿಗೆ ವಿರುದ್ಧವಾಗಿದೆ, ನೀವು ಅಣ್ವಸ್ತ್ರಗಳನ್ನು ಬರಮಾಡಿಕೊಳ್ಳಬೇಕು." ಅಮೆರಿಕಾದ ಭಯವಿದ್ದರೂ ಸಹ ನಮ್ಮ ಜನರು ಅಣುಮುಕ್ತಿಗೆ ಮತ ಹಾಕಿತು. 1981 ರಲ್ಲಿ ಸಂವಿಧಾನವು ಜಾರಿಗೆ ಬಂದಿತು.

ಅಣ್ವಸ್ತ್ರಗಳಿಗೆ ಮತ್ತು ಮಿಲಿಟರಿ ನೆಲೆಗೆ ಅನುವು ಮಾಡಿಕೊಡುವ ಯೋಜನೆಯನ್ನು 1983 ರಲ್ಲಿ ಮೊದಲಬಾರಿಗೆ ಜಾರಿಗೊಳಿಸಲಾಯಿತು. ಅಮೆರಿಕದ ಕೈಗೊಂಬೆಯಾಗಿರುವ ನಮ್ಮ ಸರ್ಕಾರ ಯೋಜನೆಯನ್ನು ಪ್ರೋತ್ಸಾಹಿಸಿತು. ಯೋಜನೆ ನಮಗೆ ತುಂಬಾ ಹಣವನ್ನು ನೀಡುವುದೆಂದು ಸರ್ಕಾರ ಹೇಳಿತು.ಅವರು ನಮಗೆ ಸುಳ್ಳು ಹೇಳುತ್ತಿದ್ದರು. ಯೋಜನೆಗೆ ಮೊದಲು ಅಮೆರಿಕದ ಸಹಾಯಧನಕ್ಕೆ ನಾವು ಅರ್ಹರಾಗಿದ್ದೆವು. ಯೋಜನೆ ಜಾರಿಗೆ ಬಂದ ಕೂಡಲೆ ಹಣ ಬರುವುದು ನಿಲ್ಲತೊಡಗಿತು. ಹಲಾವು ದ್ವೀಪದಲ್ಲಿ ಹಿಂದೆಂದೂ ಜಾರಿಗೊಳ್ಳದಂತಹ ಅದ್ಭುತ ಯೋಜನೆ ಎಂದು ವ್ಯಾಪಾಕವಾಗಿ ಪ್ರಚಾರ ಮಾಡಲಾಯಿತು. ಆದರೆ ದಾಖಲೆಯೊಳಗೆ ಏನಿದೆ ಎಂಬುದನ್ನೆ ಹೇಳಲಿಲ್ಲ. ಈಗ ಕಾಂಗೆಸ್ಸಿನವರು ಯೋಜನೆಯಲ್ಲಿ ಸಾಕಷ್ಟು ಹಣವಿಲ್ಲ ವೆನ್ನುತ್ತಿದ್ದಾರೆ. ನಾವೆಲ್ಲ ಮತ ಚಲಾಯಿಸಿದೆವು ನಮ್ಮ ದೇಶದೊಳಗೆ ಅಣ್ವಸ್ತ್ರಗಳನ್ನು ಬರಮಾಡಿಕೊಳ್ಳಲು ಅಗತ್ಯವಾದ 75% ಮತ ಅವರಿಗೆ ದೊರಕಲಿಲ್ಲ. ಹತ್ತು ಬಾರಿ ನಾವು ಅದರ ವಿರುದ್ಧ ಮತ ಚಲಾಯಿಸಿದೆವು. 11ನೇ ಬಾರಿಗೆ ಯೋಜನೆ ಜಾರಿಗೊಂಡಿತು. ನಾವು ಯೋಜನೆ ವಿರುದ್ಧ ಮತ್ತೆ ಮತ್ತೆ ಮತ ಚಲಾಯಿಸಿದೆವು. ನಾವು ಹತ್ತು ಬಾರಿ ಬೇಡವೆಂದರೂ "ಬೇಡ" ಎಂಬುದನ್ನು ಅವರು ಉತ್ತರವೆಂದು ಪರಿಗಣಿಸಲೇ ಇಲ್ಲ. ನಾವು ಒಂದೇ ಬಾರಿ ಹೌದೆಂದರೆ ತಕ್ಷಣ ಒಪ್ಪಿಕೊಳ್ಳಲು ಅವರು ಸಿದ್ಧ. ಅಮೆರಿಕಾದ ಪ್ರಜಾಪ್ರಭುತ್ವದಲ್ಲಿ ಬೇಕಾದ ಉತ್ತರ ದೊರಕುವವರೆಗೂ ನೀವು ಮತ ಚಲಾಯಿಸಬಹುದು, ಅದು ಪ್ರಜಾಪ್ರಭುತ್ವವಲ್ಲ. ಕನಿಷ್ಟ ಹತ್ತು ಬಾರಿಯಾದರೂ ಜನರು 'ಹೌದು' ಎನ್ನಬೇಕು.

1987 ರಲ್ಲಿ ಯೋಜನೆಯ ಪರವಾಗಿ ಮತ ಸಿಕ್ಕ ಸಂದರ್ಭದಲ್ಲಿ ನಮ್ಮ ದೇಶವು ಆರ್ಥಿಕ ಬಿಕ್ಕಟ್ಟು, ವ್ಯಾಪಕ ಹಿಂಸೆಯನ್ನು ಎದುರಿಸುತ್ತಿತ್ತು. ಸರ್ಕಾರ ವಿದ್ಯುತ್, ನೀರಿನ ವ್ಯವಸ್ಥೆಯನ್ನು ಬಂದು ಮಾಡಿತು, ಸರ್ಕಾರಿ ಕೆಲಸಗಾರರನ್ನು ಕೆಲಸದಿಂದ ತೆಗೆದುಹಾಕಿತು. "ಯೋಜನೆ ವಿರುದ್ಧ ಮತ ಚಲಾಯಿಸಿದರೆ ಇದೇ ನಿಮಗಾಗುವುದು" ಎಂದು ಹೇಳಿದರು. ಸರ್ಕಾರದಿಂದ ಪಡೆಯುವ ಸಂಬಳದ ಹೊರತಾಗಿ ನಮ್ಮ ಜನರಿಗೆ ಬೇರೆ ಆದಾಯವಿಲ್ಲ. ಬೇರೆ ಎಲ್ಲಿಂದಲೂ ನಮಗೆ ಧನ ಸಹಾಯ ಬರುವುದಿಲ್ಲವಾದ್ದರಿಂದ ಅಮೆರಿಕ ಬಲಿಷ್ಠವಾಗಿತ್ತು.

ಇನ್ನಿತರ ಮಹಿಳೆಯರೊಂದಿಗೆ ಟಾರೊ ಸ್ವಾಂಪ್ (ಟಾರೊ - ಆಹಾರವಾಗಿ ಬಳಸು ವಿವಿಧ ಸಸ್ಯಗಳು, ಸ್ವಾಂಪ್- ಆ-ಸಸ್ಯಗಳು ಬೆಳೆಯುವ ಜವುಗು ಭೂಮಿ)ನಲ್ಲಿ ಕೆಲಸ ಮಾಡುತ್ತಿದ್ದಾಗ ನನಗೆ ಸ್ವಾತಂತ್ರ್ಯ ಸಿಕ್ಕಂತಾಯಿತು. ಅವರೆಲ್ಲರೂ "ಸರ್ಕಾರದ ಬಗ್ಗೆ ತಲೆಕೆಡಿಸಿಕೊಳ್ಳಬೇಡಿ ವಿದ್ಯುತ್ ಒಲೆಯಲ್ಲಿ ಅಡುಗೆ ಮಾಡಿಕೊಂಡು, ನೀರಿನ ವ್ಯವಸ್ಥೆಯುಳ್ಳ ಹವಾನಿಯಂತ್ರಿತ ಮನೆಯಲ್ಲಿ ವಾಸಿಸುವವರು ಅವರೇ, ಹೆಚ್ಚಿನ ತೊಂದರೆ ಗೊಳಗಾಗುವವರು ಅವರೇ. ಅವರು ನಮ್ಮಲ್ಲಿಗೆ ಬಂದೆ ಬರುತ್ತಾರೆ ಕಾದುನೋಡಿ" ಎಂದರು. ಈ ಮಹಿಳೆಯರು ಟಾರೊ ಸ್ವಾಂಪ್‌ಗೆ ಬೆಳಗಿನ ಜಾವವೆ ಹೋಗುತ್ತಾರೆ. ಅಲ್ಲಿ ಕೆಲಸ ಮಾಡುವಾಗಲೆ ಟಾರೊಗಳನ್ನು ಬೇಯಿಸಿಕೊಂಡು ಇತರರಿಗೆ ಊಟಕ್ಕೆಂದು ಮನೆಗೆ ಒಯ್ಯುತ್ತಿದ್ದರು. ಅವರೆಲ್ಲ ವಯಸ್ಸಾದ ಮಹಿಳೆಯರು. ಸ್ವತಂತ್ರವಾಗಿ ಬದುಕಿದ್ದ ನೆನಪು ಅವರಿಗಿತ್ತು. ನಾನು ಶಾಲೆ




ಶಾಂತ ಸಾಗರ ಪ್ರದೇಶದಲ್ಲಿ ಅಣ್ವಸ್ತ್ರ ನೆಲೆಗಳು

ಕಲಿತು ದೂರ ಹೋದರೂ ನನ್ನ ಅಜ್ಜಿಯೊಂದಿಗೆ ಬೆಳೆದವಳಾದ್ದರಿಂದ ಸ್ವಾತಂತ್ರ್ಯವೇನೆಂದು ನನಗೆ ತಿಳಿದಿತ್ತು. ಆದರೆ ಈಗ ಅಮೆರಿಕ "ನಿಮ್ಮ ಆಹಾರವನ್ನು ಬೆಳೆದುಕೊಳ್ಳುವ ಈ ನೆಲವನ್ನು ನಾನು ಯಾವಾಗ ಬೇಕಾದರೂ, ಎಷ್ಟು ಬೇಕಾದರೂ, ಯಾವ ಉದ್ದೇಶಕ್ಕಾಗಿಯಾದರೂ ಅದು ಮಿಲಿಟರಿಗಾಗಲಿ, ನ್ಯೂಕ್ಲಿಯರ್ ಉದ್ದೇಶಕ್ಕಾಗಲಿ ನಿಮ್ಮಿಂದ ತೆಗೆದುಕೊಳ್ಳ ಬಹುದು" ಎಂದು ಹೇಳಿತು.

ಸಂಸತ್ತಿನಲ್ಲಿ, ಸೆನೆಟ್‌ನಲ್ಲಿ 2/3 ಮತ ಸಿಕ್ಕಾಗ ಮಾತ್ರವೇ ಯೋಜನೆ ಒಪ್ಪಿತವಾಗುವುದು. ಆದರೆ ನಮ್ಮ ಅಧ್ಯಕ್ಷರು ಯೋಜನೆಯನ್ನು ಸಮ್ಮತಿಸಿ ಅಮೆರಿಕಾಧ್ಯಕ್ಷ ರೀಗನ್‌ರವರಿಗೆ ಕಳಿಸಿದರು. ಅವರು ಸಮ್ಮತಿಸಿ ಅಮೆರಿಕ ಶಾಸನಸಭೆಗೆ ಕಳಿಸಿದರು. ಆಗ ಅಲ್ಲಿನ 24 ಮಹಿಳೆಯರು ಪಲಾವು ಅಧ್ಯಕ್ಷರ ವಿರುದ್ಧ ಅಸಂವಿಧಾನಾತ್ಮಕವಾಗಿ ಯೋಜನೆಗೆ ಒಪ್ಪಿಗೆ ನೀಡಿದ್ದಾರೆಂದು ಮೊಕದ್ದಮೆ ಹೂಡಿದರು. ಇದಾದ್ದದ್ದು 1987 ರಲ್ಲಿ.

ಆ ಸಂದರ್ಭದಲ್ಲಿ ಕೆಲಸ ಕಳೆದುಕೊಂಡಿದ್ದ ಕಾರ್ಮಿಕರು ಆ ಮಹಿಳೆಯರ ಮನೆಗೆ ಹೋಗಿ ಮೊಕದ್ದಮೆ ಹಿಂತೆಗೆದುಕೊಳ್ಳಿ ಎಂದು ಕೊಲೆಯ ಬೆದರಿಕೆ ಹಾಕಿದರು. ಮಹಿಳೆಯರು ಕುಡಿಯುವ ಪಾನೀಯಗಳಿಗೆ ಮಾದಕ ವಸ್ತುಗಳನ್ನು ಬೆರೆಸಲಾಗಿತ್ತು. ಗುಂಡು ಹಾರಿಸಲಾಯಿತು. "ಸೆಪ್ಟೆಂಬರ್ 8 ಶಾಂತಿಯಿಂದ ವಿರಮಿಸಿ" ಎಂಬ ಫಲಕಗಳನ್ನು ಹಾಕಿದರು. ನಮ್ಮ ಮಹಿಳೆಯೊಬ್ಬರ ತಂದೆಯನ್ನು ಗುಂಡಿಟ್ಟು ಕೊಂದರು. ಆಕೆಯ ವಕೀಲ ಸಹೋದರನನ್ನು ಕೊಲ್ಲಲು ಪ್ರಯತ್ನಿಸಿದರು. ಮಹಿಳಾ ನಾಯಕಿಯ ಮನೆಯಲ್ಲಿ ಬಾಂಬ್ ಸ್ಫೋಟಿಸಿದರು. ಕೊರೂರ್‌ನಲ್ಲಿ ಯೋಜನೆ ವಿರುದ್ಧ ಮತ ಚಲಾಯಿಸಿದ ಅನೇಕ ಜನರ ಮನೆಯನ್ನು ಸುಟ್ಟುಹಾಕಿದರು. ಲೈಟುಗಳನ್ನು ಆರಿಸಲಾಗಿತ್ತು. ಎಲ್ಲವೂ ತಕ್ಷಣವೇ ನಡೆದು ಹೋಯಿತು. ನಂತರ ಪೊಲೀಸರು ಮಹಿಳೆಯರ ಮನೆಗಳಿಗೆ ಹೋಗಿ ಮೊಕದ್ದಮೆಯನ್ನು ಹಿಂತೆಗೆದುಕೊಳ್ಳುವಂತೆ ಸಹಿ ಹಾಕಿಸಿದರು. ಅಂತಿಮವಾಗಿ ಇಬ್ಬರು ಮಹಿಳೆಯರು ನ್ಯಾಯಾಲಯಕ್ಕೆ ಹೋಗಿ ಮೊಕದ್ದಮೆಯನ್ನು ಹಿಂತೆಗೆದು ಕೊಂಡಿದ್ದಾರೆಂದು ಹೇಳಿದರು. ಅಮೆರಿಕಾ ನ್ಯಾಯಾಧೀಶ ನ್ಯಾಯಾಲಯದ ಹೊರಗೆ ಹೋಗಿ ನೋಡಿದರು. ಅಲ್ಲಿ ವೇಷ ಮರೆಸಿಕೊಂಡು ಬಂದೂಕುಧಾರಿ ಪೋಲಿಸರು ನ್ಯಾಯಾಲಯದ ಸುತ್ತಲೂ ನಿಂತಿರುವುದನ್ನು ಕಂಡರು. ಒತ್ತಡ ಹೇರಿದ್ದರಿಂದ ಮೊಕದ್ದಮೆಯನ್ನು ಹಿಂತೆಗೆದುಕೊಳ್ಳಲಾಗಿದೆ. ಯಾವಾಗ ಬೇಕಾದರು ಈ ಮಹಿಳೆಯರು ಮರು ಮೊಕದ್ದಮೆ ಹೂಡಬಹುದೆಂದು ಹೇಳಿದರು.

ಅಮೆರಿಕದ ಸಂಸತ್ತಿನಲ್ಲಿ ವಿಷಯವನ್ನು ಮುಂದಿಟ್ಟಾಗ,

ಮಹಿಳೆಯರ ನಾಯಕಿ ಗ್ಯಾಬ್ರಿಯಲಾ ಗಿರ್‌ಮಾಂಗ್‌ರವರು ತಾವು ಮರು ಮೊಕದ್ದಮೆ ಹೂಡುವುದಾಗಿ ಹೇಳಿದರು. ಕೆಲವಾರು ದಿನಗಳು ನಾವು ಅಲ್ಲಿದ್ದ ಸಮಯದಲ್ಲೆ ಗ್ಯಾಬ್ರಿಯಾಲಾಗೆ ಹೃದಯಾಘಾತವಾಯಿತು. ಅಮೆರಿಕದ ಸಂಸತ್ತಿನಲ್ಲಿ ಮಾತನಾಡುವ ಕೆಲಸ ನನ್ನ ಮೇಲೆ ಬಿತ್ತು. ನಾವು ಅಪಾಯಕಾರಿ ವಾತಾವರಣ ದಲ್ಲಿರುವುದರಿಂದ ನಮಗೆ ಸಮಯಾವಕಾಶ ಮಾಡಿಕೊಡಬೇಕೆಂದು ಕೇಳಿದೆವು. ಒಂದು ವರ್ಷದ ಬಳಿಕ ಮತ್ತೆ ನ್ಯಾಯಾಲಯಕ್ಕೆ ಹೋದೆವು. ಯೋಜನೆಯನ್ನು ನಿಷ್ಪ್ರಯೋಜಕವೆಂದು ಘೋಷಿಸಲಾಯಿತು. ನಮಗೆ ತುಂಬಾ ಸಂತೋಷವಾಯಿತು. ಆದರೆ ಆ ಸಂತೋಷ ಹೆಚ್ಚು ಕಾಲ ಉಳಿಯಲಿಲ್ಲ. ಮತ್ತೆ ಮತ್ತೆ ಚಲಾಯಿಸುವಂತೆ ಒತ್ತಾಯಿಸಲಾಯಿತು. ಸಂವಿಧಾನ ತಿದ್ದುಪಡಿಸಿ ಶೇ. 75 ಮತಗಳನ್ನು ಶೇ. 51 ಮತಗಳಿಗೆ ಇಳಿಸಲಾಯಿತು. ಈ ಮೂಲಕ ಸರಳ ಬಹುಮತ ಪಡೆದು ಯೋಜನೆ ಜಾರಿಗೊಳಿಸ ಬಹುದೆಂದು ಕೊಂಡರು. 75% ಅನ್ನು 51% ನಿಂದ ತೆಗೆದುಹಾಕ ಬಹುದೆಂದು ನಾವೆಂದುಕೊಂಡಿರಲಿಲ್ಲ. ಅಷ್ಟೊತ್ತಿಗಾಗಲೆ ನಮ್ಮ ನ್ಯಾಯಾಲಗಳಿಗೆ ಬೇರೆ ಬೇರೆ ನ್ಯಾಯಧೀಶರುಗಳು ಬಂದರು. ಅವರೆಲ್ಲ ನಮ್ಮ ವಿರೋಧಿಗಳಾಗಿದ್ದರು.

1994 ರಲ್ಲಿ ಹೆಚ್ಚು ಮೊಕದ್ದಮೆಗಳನ್ನು ನಾವು ಹೂಡಿದೆವು. ಪಲಾಉವಿನಲ್ಲಿ ನಮ್ಮನ್ನು ಬೆಂಬಲಿಸುವವರು ಯಾರೂ ಇರಲಿಲ್ಲ. ಕಾರಣ ನಮ್ಮ ಬಳಿ ಹಣವಿರಲಿಲ್ಲ ಮತ್ತು ಭೀತಿಯ ವಾತಾವರಣವಿತ್ತು. ನಮಗೆ ಅಮೆರಿಕಾದ ವಕೀಲರೊಬ್ಬರು ಸಿಕ್ಕರು. ಅದರಿಂದ ಪ್ರಯೋಜನವಾಗದ ಕಾರಣ ಅವರಿಗೆ ನಮ್ಮನ್ನು ಪ್ರತಿನಿಧಿಸಬೇಡಿರೆಂದು ಹೇಳಿದೆವು. ಮತ್ತೊಬ್ಬ ವಕೀಲರನ್ನು ನೇಮಿಸಿಕೊಳ್ಳುವಷ್ಟು ಶಕ್ತಿ ಇಲ್ಲದ ಕಾರಣ ಪಲಾಉವಿನಲ್ಲಾಗಲಿ ಹೊನಲುಲುವಿನಲ್ಲಾಗಲಿ ಮನವಿ ಮಾಡಿಕೊಳ್ಳಲಾಗಲಿಲ್ಲ. ನಾವು ಹಿಂತೆಗೆದುಕೊಂಡದ್ದರಿಂದ ಯೋಜನೆ ಜಾರಿಗೆ ಬಂತು. 1994ರ ಅಕ್ಟೋಬರ್‌ನಲ್ಲಿ ಪಲಾಉವನ್ನು ಸ್ವಾತಂತ್ರ್ಯ ದೇಶವೆಂದು ಘೋಷಿಸಲಾಯಿತು. ಇದೊಂದು ಘೋರ ಅನುಭವ. ನಾವು ಪ್ರಯತ್ನಪಟ್ಟು ನ್ಯಾಯಾಲಯ ನಮ್ಮನ್ನು ವಿರೋಧಿಸಿದ್ದರೂ ನಮಗೆ ನೋವಾಗುತ್ತಿರಲಿಲ್ಲ. ತಾತ್ವಿಕವಾಗಿ ಅಲ್ಲ, ವಕೀಲರಿಂದ ಸಂಪೂರ್ಣ ಸಹಕಾರ ಸಿಗದ ಕಾರಣ ಸೋತೆವು. ಆ ಬಗ್ಗೆ ನನಗೆ ತುಂಬಾ ವೇದನೆಯಿದೆ.

ಒಂದೇ ಒಂದು "ಹೌದು" ನಮ್ಮನ್ನು ಅಮೆರಿಕದ ಮಿಲಿಟರಿಯ ಗಾಳಕ್ಕೆ ಸಿಕ್ಕಿಸಿತು. ಮುಂದಿನ ಐವತ್ತು ವರ್ಷಕ್ಕೆ ಅಥವಾ ಕೊನೆಯುವರೆಗೆ, ಈ ಯೋಜನೆಯು ಅಮೆರಿಕಾಕ್ಕೆ ಮಿಲಿಟರಿ ನೆಲೆ ಸ್ಥಾಪಿಸಲು, ಅಣ್ವಸ್ತ್ರಗಳನ್ನು, ಯುದ್ಧ ವಿಮಾನಗಳನ್ನು ಇಡಲು ಅಧಿಕಾರ ನೀಡಿತು. 60 ದಿನಗಳ ನೋಟಿಸು ನೀಡಿ ಯಾವ ಜಾಗವನ್ನಾದರೂ ಅವರು ಆಕ್ರಮಿಸಿ ಕೊಳ್ಳಬಹುದು. ಯಾವ ಜಾಗವನ್ನು ತೆಗೆದುಕೊಂಡರೂ ತನಗೆ ಬೇಕಾದಂತೆ ಅದನ್ನು ಬದಲಾಯಿಸಿಕೊಳ್ಳಬಹುದು. ಕೆಲಸ ಮುಗಿದ ಮೇಲೆ ಆ ಜಾಗವನ್ನು ಮೊದಲಿನ ಸ್ಥಿತಿಗೆ ತರುವ ಯಾವ ಜವಾಬ್ದಾರಿಯೂ ಅವರಿಗಿರುವುದಿಲ್ಲ. ಪರಿಸರ ನೀತಿಯನ್ನು ಪಲಾಉವಿನ ನಿಬಂಧನೆಗಳನ್ನು ಪಾಲಿಸುವುದಾಗಿ ಭರವಸೆಯಿತ್ತಿದ್ದಾರೆ. ಆದರೆ ಅಮೆರಿಕಾಧ್ಯಕ್ಷರು ಅವೆಲ್ಲವನ್ನು ತೂರಬಹುದು.

ಅಮೆರಿಕಾಕ್ಕೆ ಮಲ್ಕಲ್ ಬಂದರು ಬೇಕು. ಫೆಸಿಫಿಕ್‌ನಲ್ಲೆ ಅತ್ಯಂತ ಆಳವಾದ ಬಂದರಿದು. ಪಲಾಉ ದ್ವೀಪವು ಅಮೆರಿಕಾದ ಮಿಲಿಟರಿ ತಂತ್ರಕ್ಕೆ ಅನುಕೂಲವಾದ ಆಯಕಟ್ಟಿನಲ್ಲಿದೆ. ಈಗಾಗಲೆ ಅಮೆರಿಕದ ಎರಡು ನೆಲೆಯಿರುವ ಫಿಲಿಪೈನ್ಸ್, ವಾಯುಸೇನೆ ಮತ್ತು ಸಂಪರ್ಕನೆಲೆ ಇರುವ ಗ್ವಾಂ, ಕ್ಷಿಪಣಿ ನೆಲೆಯಿರುವ ಮಾರ್ಷಲ್ ದ್ವೀಪ ಮತ್ತು ಪೆಸಿಫಿಕ್ ಸಾಗರದ ಮುಖ್ಯಸ್ಥಾನ ಹವಾಯ್ ದ್ವೀಪಗಳ ನಡುವೆ ಪಲಾಉ ದ್ವೀಪವಿರುವುದು ಅವರಿಗೆ ಸೂಕ್ತವಾಗಿದೆ. ಪ್ರತಿಯಾಗಿ ಅಮೆರಿಕಾ ಪಲಾಉವಿಗೆ 50 ವರ್ಷಗಳಿಗೆ ಸಹಾಯವಾಗಿ 450,000,000 ಅಮೆರಿಕ ಡಾಲರ್‌ಗಳನ್ನು ನೀಡುತ್ತದೆ. ಈ ಒಪ್ಪಂದವನ್ನು ಪಲಾಉ ಒಂದೇ ಮುರಿಯಲು ಸಾಧ್ಯವಿಲ್ಲ, ಬದಲಿಗೆ ಪರಸ್ಪರ ಎರಡೂ ದೇಶಗಳು ಒಪ್ಪಿ ಮುರಿಯಬೇಕು. ಅಂದರೆ ಇದೊಂದು ಶಾಶ್ವತ ಒಪ್ಪಂದ. ಒಪ್ಪಂದ ಮುರಿಯುವ ಉದ್ದೇಶವೇ ಇಲ್ಲದಿದ್ದ ಪಕ್ಷದಲ್ಲಿ ಅಮೆರಿಕ ಶಾಶ್ವತವಾಗಿ ಉಳಿಯಬಹುದು.

ನಮ್ಮ ದ್ವೀಪಗಳು ತೀವ್ರವಾಗಿ ಬದಲಾಗುತ್ತಿವೆ. ಯಾಕೆಂದರೆ ಸ್ವಾತಂತ್ರ್ಯವೆಂದರೆ ಬೃಹತ್ ವ್ಯಾಪಾರಕ್ಕೆ ಭದ್ರತೆಯಲ್ಲವೆ! ಜಪಾನ್, ಚೈನಾ, ಕೊರಿಯಾದವರು ಬೃಹತ್ ಹೋಟೆಲ್‌ಗಳು, ಫ್ಯಾಕ್ಟರಿಗಳು, ವ್ಯಾಪಾರವನ್ನು ಹೊತ್ತು ತರುತ್ತಿದ್ದಾರೆ. ಅವರಿಗೆ ಅಗತ್ಯವಾದ ಕೆಲಸಗಳನ್ನು ನಮ್ಮವರು ತಿಳಿದಿಲ್ಲವಾದ್ದರಿಂದ ಅವರದೆ ಕೆಲಸಗಾರರನ್ನು ಕರೆತರುತ್ತಿದ್ದಾರೆ. ಹೊರದೇಶದ ಕೆಲಸಗಾರರು ಹೆಚ್ಚಿನ ಸಂಖ್ಯೆಯಲ್ಲಿ ಬರುತ್ತಿರುವುದಲ್ಲದೆ ಹೆಚ್ಚಿನ ಸಮಸ್ಯೆಗಳನ್ನು ತರುತ್ತಿದ್ದಾರೆ. ಫಿಲಿಫೈನ್ಸ್‌ನ ಕೆಲಸಗಾರರು ಕಟ್ಟಡ ನಿರ್ಮಾಣದ ಕಂಪನಿಗಳಲ್ಲಿ ಅಥವಾ ಜಪಾನಿಯರ ಬಾರುಗಳಲ್ಲಿ ವೇಶ್ಯೆಯರಾಗಿ ಕೆಲಸ ಮಾಡಲು ಬರುತ್ತಾರೆ. ಈ ಮಹಿಳೆಯರು ಫಿಲಿಫೈನ್ಸ್‌ನಲ್ಲಿರುವ ಅಮೆರಿಕಾದ ನೆಲೆಗಳಲ್ಲೂ (ಸುಬಿಕ್ ನೌಕನೆಲೆ, ಕ್ಲಾರ್ಕ್‌ವಾಯು ನೆಲೆ) ಇದ್ದವರು. ಈ ನೆಲೆಗಳಲ್ಲಿ

ಪ್ರತಿಭಟನೆ, ಜ್ವಾಲಾಮುಖಿ ಉಂಟಾದ ಕಾರಣ ಅವರೆಲ್ಲ ಇಲ್ಲಿಗೆ ಬಂದಿದ್ದಾರೆ. ನಮ್ಮ ಜನಸಂಖ್ಯೆ 16000 ದಷ್ಟಿತ್ತು. ಈಗ ಬಹಳವಾಗಿದೆ. ಯೋಜನೆ ಜಾರಿಗೆ ಬಂದಾಗಿನಿಂದ ಅನೇಕ ಕಟ್ಟಡಗಳು ತಲೆ ಎತ್ತಿವೆ.

ಅಮೆರಿಕ, ಬ್ರಿಟನ್, ಪಲಾಉ ಸರ್ಕಾರಗಳು ಒಟ್ಟಾಗಿ ಯೋಜನಗೆ ಬಲಾತ್ಕಾರವಾಗಿ ನಮ್ಮನ್ನು ಒಪ್ಪಿಸಿತು. ನಮ್ಮ ದೇಶದಲ್ಲಿದ್ದ ವಿದ್ಯುತ್ ಸ್ಥಾವರವು ತೈಲದಿಂದ ನಡೆಯುತ್ತಿದ್ದು ಅದನ್ನು ಅಮೆರಿಕಾದ ಮಿಲಿಟರಿಯವರು ಯುದ್ಧದ ನಂತರ ನಿರ್ಮಿಸಿದ್ದರು. ಈಗ ಹೊಸ ವಿದ್ಯುತ್ ಸ್ಥಾವರದ ಅಗತ್ಯ ವಿರುವುದರಿಂದ, ಇಂಗ್ಲೆಂಡಿನ ಒಂದು ಕಂಪೆನಿಯನ್ನು ಕರೆಯಲಾಗಿದೆ. ಆ ಕಂಪೆನಿಯು ವಿದ್ಯುತ್ ಸ್ಥಾವರವನ್ನು ಪಲಾಉವಿಗೆ 32 ಮಿಲಿಯನ್ ಡಾಲರಿಗೆ ಮಾರಾಟ ಮಾಡಿದೆ. (ಮುಂದೆ ಅಮೆರಿಕ ಸಂಸತ್ತು ನಡೆಸಿದ ತನಿಖೆಯಿಂದ ವಿದ್ಯುತ್ ಸ್ಥಾವರದ ಬೆಲೆ ಆ ಹೊತ್ತಿಗೆ 15 ಮಿಲಿಯನ್ ಡಾಲರ್‌ಷ್ಟೇ ಆಗುವುದೆಂದು ತಿಳಿಯಿತು.) ನಾವಿನ್ನು ಯೋಜನೆಯ ಹಣವನ್ನು ತೆಗೆದು ಕೊಳ್ಳಲು ಒಪ್ಪಿಗೆ ನೀಡುವ ಮೊದಲೇ ಅದನ್ನು ಬಳಸಿಕೊಳ್ಳಲು ಅಮೆರಿಕಾ ಅನುಮತಿ ನೀಡಿತು. ಇದರ ಹಿಂದಿನ ಉದ್ದೇಶ ನಮ್ಮನ್ನು ಸಾಲದ ಉರುಳಿಗೆ ಸಿಲುಕಿಸುವುದಾಗಿತ್ತು. ವಿದ್ಯುತ್ ಸ್ಥಾವರವನ್ನು ಕೊಳ್ಳಲು ನಮಗೆ ಸಾಲ ನೀಡಿದರೆ ಹಿಂತಿರುಗಿಸುವ ಸಲುವಾಗಿ ನಾವು ಯೋಜನೆಯ ಪರ ಮತ ಹಾಕಬೇಕು. ಬಲವಂತವಾಗಿ ಮತ ಹಾಕಿಸಲು ಸಾಲವನ್ನು ಬಳಸಿಕೊಂಡರು. ಈಗಲೂ ನಾವು ಸಾಲವನ್ನು ತೀರಿಸುತ್ತಿದ್ದೇವೆ.

ಅಮೆರಿಕದ ವಿರುದ್ಧ ಗಟ್ಟಿಯಾಗಿ ನಿಂತವರು ನಾವು ಮಹಿಳೆಯರು, ಪುರುಷರಲ್ಲ. ಅಮೆರಿಕದ ಒತ್ತಡದಲ್ಲಿ ಪುರುಷರು ಅದೃಶ್ಯರಾಗಿಬಿಟ್ಟರು. ಆದರೆ ನಾವು ಯೋಜನೆ ವಿರುದ್ಧ ಕೆಲಸ ಮಾಡುವಾಗ ಈ ಪುರುಷರನ್ನೆ ನಾವು ಎದುರಿಸಬೇಕಾಯ್ತು. ಪಲಾಉವಿನಲ್ಲಾಗಲಿ ಅಮೆರಿಕಾ ಸಂಸತ್ತಿನಲ್ಲಾಗಲಿ, ಯು.ಎನ್. ನಲ್ಲಾಗಲಿ ನಾವು ಎದುರಿಸಿದ್ದು ಗಂಡಸರನ್ನೆ. ನಮ್ಮ ಸರ್ಕಾರವೂ ಗಂಡಸರದೇ ಯಾಕೆಂದರೆ ಅಮೆರಿಕ ತನ್ನದೇ ವ್ಯವಸ್ಥೆಯನ್ನು ಇಲ್ಲೂ ಹೇರಿತು. ಎಲ್ಲವು ಗಂಡಸರದೇ. ಮಹಿಳೆಯರೆ ಅವರನ್ನು ಕಳಿಸಿದ್ದರು. ನಾವು ಆಂದೋಲನಗಳನ್ನು ಏರ್ಪಡಿಸಿದೆವು. ಮನೆ ಮನೆ ಬಾಗಿಲಿಗೆ ಹೋದೆವು. ಅವರನ್ನು ಸರ್ಕಾರಕ್ಕೆ ಕಳಿಸಿದೆವು. ಮೂಲಭೂತವಾಗಿ ಪಲಾಉವಿನದು ಮಾತೃಪ್ರಧಾನ ಸಂಸ್ಕೃತಿ. ನೆಲ ಹಾಗೂ ಸಾಂಪ್ರದಾಯಿಕ ಹಣ ಕುರಿತು ನಿರ್ಧಾರ ತೆಗೆದುಕೊಳ್ಳುವರು ಮಹಿಳೆಯರಾದ್ದರಿಂದ ಮಹಿಳೆಯರಿಗೆ ಅಧಿಕಾರವಿದೆ. ಪುರುಷ ಮುಖ್ಯಸ್ಥನಾಗಿರುವಾಗ ಅವನು ತನ್ನ ಸಹೋದರಿಯ ಮಾತನ್ನು ಕೇಳಬೇಕು. ಮಹಿಳೆಯರು ಮುಖ್ಯಸ್ಥನನ್ನು ಆರಿಸುವರು. ಮುಖ್ಯಸ್ಥನಾದಾಗ ಬೆಂಬಲಿಸು ವವರು ಅವನು ಸಹಿಸಿಕೊಳ್ಳಲಾಗದಂತಾದಾಗ ಅವನನ್ನು ಕೆಳಗಿಳಿಸುತ್ತೇವೆ. ಅಲ್ಲಿ ಸಮತೋಲನವಿದೆ. ನಾನು ಯಾವ ಮಹಿಳೆಯರೊಟ್ಟಿಗೆ ಕೆಲಸ ಮಾಡುತ್ತೇನೋ ಆ ಮಹಿಳೆಯರು ಗಂಡಸರಿಗೆ ಹೆದರುವುದಿಲ್ಲ. ಈಗಿನವರು ಹಾಗಿಲ್ಲ. ಮಹಿಳೆಯರಾಗಿ ಈಗ ನಮ್ಮ ಹಕ್ಕನ್ನು ನಾವು ಕೇಳದಿದ್ದರೆ ಮಾತೃ ಸಂಸ್ಕೃತಿಯನ್ನು ನಾವು ಪೂರ್ತಿಯಾಗಿ ಕಳೆದುಕೊಳ್ಳುತ್ತೇವೆ. ಅಮೆರಿಕ ನಡೆಸುತ್ತಿರುವ ಅನ್ಯಾಯ ಕುರಿತು ಜಾಗತೀಕ ಅರಿವು ಮೂಡಿಸುವುದನ್ನು ನಾವು ಪ್ರೋತ್ಸಾಹಿಸಬೇಕು. ನ್ಯೂಕ್ಲಿಯರಿಸಮ್ ನಿಂದಾಗಿ ಜನ ಸಾಯುತ್ತಿದ್ದಾರೆ. ಈ ಜಗತ್ತನ್ನು ಕ್ಷೇಮವಾಗಿಡುವ ಸಲುವಾಗಿ ನಾವೆಲ್ಲರೂ ದುಡಿಯಬೇಕಾಗಿದೆ.

ನನ್ನ ದ್ವೀಪದಿಂದ ಎಷ್ಟೆಷ್ಟೋ ಮೈಲಿ ದೂರದಲ್ಲಿ ವಾಸಿಸುವ ಜನರು ನಮ್ಮ ನೆಲವನ್ನು ಏಕೆ ತೆಗೆದುಕೊಳ್ಳಬೇಕು? ನಮ್ಮ ನೆಲವನ್ನು ಕಾಯ್ದುಕೊಳ್ಳುವ ಸಲುವಾಗಿ ನಮ್ಮ ಪುಟ್ಟ ದ್ವೀಪವು ಜಗತ್ತಿನಲ್ಲೆ ಅತ್ಯಂತ ಬಲಾಢ್ಯವೆನಿಸಿಕೊಂಡಿರುವ ದೇಶವನ್ನೇಕೆ ಎದುರಿಸಬೇಕು? ಈ ಸಂಘರ್ಷ ಮುಗಿದಿಲ್ಲ, ಪಲಾಉ ಸ್ವತಂತ್ರ ವಾಗುವವರೆಗೂ, ನಮ್ಮ ನೆಲ ಮಿಲಿಟರಿ ಭೀತಿಯಿಂದ ಸುರಕ್ಷಿತ ವಾಗುವವರೆಗೂ ಮುಗಿಯುವುದಿಲ್ಲ.

*ಆಧಾರ: ಪೆಸಿಫಿಕ್ ವಿಮೆನ್ ಸ್ಪೀಕ್ ಔಟ್*

❑

*ಮಾನಸದ ಪ್ರಕಟಣೆ ಮಾನಸದ ಓದುಗರ ಆರ್ಥಿಕ ನೆರವನ್ನು ಅವಲಂಬಿಸಿದೆ. ಓದುಗರು ಚಂದಾ ನವೀಕರಣದ ಸೂಚನೆ ಬಂದ ಕೂಡಲೇ ಚಂದಾ ನವೀಕರಿಸಿ ಸಹಕರಿಸಬೇಕೆಂದು ಕೋರುತ್ತೇವೆ.*

*ಸಂ. ಮಂಡಳಿ*

# ಹೀಗೊಬ್ಬ ಸಂತ!

ಪಶ್ಚಿಮ ದೇಶಗಳು, ನಿರ್ದಿಷ್ಟವಾಗಿ ಅಮೆರಿಕಾವನ್ನು ಕುರಿತಂತೆ ಎಲ್ಲರೂ ಸಾಮಾನ್ಯವಾಗಿ ಹೇಳುವುದೇನೆಂದರೆ ಅಧಿಕಾರಕ್ಕೆ, ತಾಂತ್ರಿಕತೆಗೆ ಮಾರಿಕೊಂಡ ದೇಶವೆಂದು. ಪಾಶ್ಚಾತ್ಯ/ಅಮೆರಿಕ ಪ್ರಾಬಲ್ಯವನ್ನು ವಿರೋಧಿಸುವ ಜನರಿಗೂ ಈ ಅಭಿಪ್ರಾಯವಿದೆ. ಇದೇ ಭಾವನೆಯೊಂದಿಗೆ ಇತ್ತೀಚೆಗೆ ಜಿಮ್ ಆಲ್ಬರ್ಟಿನಿಯ ವರನ್ನು ಕರೆದಿದ್ದ ಸಭೆಗೆ ಹೋದಾಗ ನಮ್ಮೆಗೆಲ್ಲ ಅಚ್ಚರಿ ಕಾದಿತ್ತು. ಗಾಂಧಿವಾದದಲ್ಲಿ ನಂಬಿಕೆ ಇಟ್ಟುಕೊಂಡಿರುವ, ಶಾಂತಿಪ್ರಿಯ ಹೋರಾಟಗಾರ ಜಿಮ್‌ನ ಆಯುಧಗಳೆಂದರೆ ಹಾಡುಗಳು, ಗಿಟಾರ್. ಅಹಿಂಸಾತ್ಮಕ ಪ್ರತಿಭಟನೆಗೆ ಇಡೀ ಜೀವನವನ್ನು ಮುಡಿಪಾಗಿಟ್ಟಿರುವ ಜಿಮ್ ಅವರನ್ನು ಭೇಟಿಯಾದುದೊಂದು ಅವಿಸ್ಮರಣೀಯ ಅನುಭವ.

ಹವಾಯಿ ದ್ವೀಪದಿಂದ ಬಂದಿದ್ದ ಜಿಮ್ ಅವರ ಭೇಟಿಯನ್ನು ಗಾಂಧಿ ಭವನದಲ್ಲಿ ಏರ್ಪಡಿಸಿದ್ದು ಸಮಂಜಸವಾಗಿತ್ತು. ಈ ಸಂತನಿಗೆ ಗಾಂಧಿ ಮತ್ತು ಮಾರ್ಟಿನ್ ಲೂಥರ್ ಕಿಂಗ್ ಇಬ್ಬರೂ ಜೀವನದ ಆದರ್ಶ. ಆ ದಿವಸ ಅವರ ಬದುಕು ಮತ್ತು ರಾಜಕೀಯ ನಂಬಿಕೆಗಳನ್ನು ಕೇಳುವ ಅವಕಾಶ ನಮಗೆ ಸಿಕ್ಕಿದ್ದೊಂದು ಭಾಗ್ಯ. ಅವರೇ ಬರೆದು ಸಂಯೋಜಿಸಿರುವ ಸರಳ, ಸುಂದರ ಹೋರಾಟದ ಹಾಡುಗಳನ್ನು ಆ ದಿವಸ ಗಿಟಾರ್ ನುಡಿಸಿಕೊಂಡು ಹಾಡಿದರು.

ವಿದ್ಯಾರ್ಥಿಯಾಗಿ ಅವರು ಓದಿದ್ದು ಅರ್ಥಶಾಸ್ತ್ರ ಮತ್ತು ಥಿಯೋಲಜಿಯನ್ನು. ಅರ್ಥಶಾಸ್ತ್ರವು ಜನರ ಲೌಕಿಕ ಅಗತ್ಯಗಳನ್ನು, ಥಿಯೋಲಜಿಯು ಜನರ ಆಧ್ಯಾತ್ಮಿಕ ಅಗತ್ಯಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯ ಮಾಡಬಹುದೆಂದು ಅವೆರಡನ್ನು ಓದಲು ಹೋದ ಜಿಮ್‌ಗೆ ಮುಂದೆ ಭ್ರಮನಿರಸನವಾಯಿತಂತೆ. ಅವು ಜನರ ಬದುಕಿಗೆ ಸಂಬಂಧಪಟ್ಟ ವಿಷಯಗಳನ್ನೇ ಹೇಳುವುದಿಲ್ಲವೆನಿಸಿದಾಗ ನೇರ ಜನರ ಬದುಕಿನ ಹೋರಾಟದಲ್ಲಿ ತೊಡಗಿಕೊಂಡು ಅರಿವು ಮೂಡಿಸಿಕೊಳ್ಳಬೇಕೆಂದುಕೊಂಡರು. ಅಹಿಂಸಾತ್ಮಕ ಚಳುವಳಿಯ ಮೂಲಕವಷ್ಟೆ ಜನರ ಹಕ್ಕುಗಳಿಗಾಗಿ ಹೋರಾಡಬೇಕೆಂಬುದು ಅವರ ನಂಬಿಕೆ. ಅವರ ಮೊದಲ ಪ್ರತಿಭಟನೆಯೇ ವಿಯಾಟ್ನಾಂ ಯುದ್ಧದ ವಿರುದ್ಧವಾಗಿತ್ತು. ಪ್ರತಿಭಟನಾಕಾರರು ಹವಾಯಿ ದ್ವೀಪದಲ್ಲಿದ್ದ ಮಿಲಿಟರಿ ನೆಲೆಗೆ ಹೋಗಿ ಅಲ್ಲಿದ್ದ ಯುದ್ಧ ಕುರಿತ ಗೌಪ್ಯ ವರದಿಗಳನ್ನು ತಮ್ಮ ನೆತ್ತರು ಸುರಿದು ಅಳಿಸಿ ಹಾಕಿದರು. ಪ್ರತಿಭಟನಾಕಾರರ ಮೇಲೆ ಸರ್ಕಾರ ತೀವ್ರ ಕ್ರಮ ತೆಗೆದುಕೊಳ್ಳಬೇಕೆಂದಿತ್ತು. ಆದರೆ ಸಾಕ್ಷಿಯಾಗಿ ಗೌಪ್ಯ ವರದಿಗಳನ್ನು ನ್ಯಾಯಾಲಯದಲ್ಲಿ ಹಾಜರು ಪಡಿಸಿದರೆ ತಮ್ಮ ನಿಲುವುಗಳು ಬಯಲಾಗುತ್ತವೆ ಎಂದು ಕ್ರಮ ಕೈಗೊಳ್ಳಲಿಲ್ಲ, ಜಿಮ್ ಮತ್ತವರ ಸ್ನೇಹಿತರಿಗೆ ಸರಳ ಶಿಕ್ಷೆ ವಿಧಿಸಿ ಬಿಡುಗಡೆಗೊಳಿಸಲಾಯ್ತು. ವಿಯಾಟ್ನಾಂ ಯುದ್ಧದ ನಂತರ, ಜಿಮ್ ಅವರು, ಅವರ ಸ್ನೇಹಿತರೊಂದಿಗೆ 'ಡಾರ್ಕ್ ಸೈಡ್ ಆಫ್ ದಿ ಪ್ಯಾರಡೈಸ್' ಎಂಬ ಪುಸ್ತಕವನ್ನು ಬರೆದು ಪ್ರಕಟಿಸಿದರು. ಯುದ್ಧ ವಿರೋಧಿಸಿ ನಡೆಸಿದ ಹೋರಾಟವನ್ನು ಪುಸ್ತಕದಲ್ಲಿ ದಾಖಲಿಸಿದ್ದಾರೆ.

ಅವರ ಮುಂದಿನ ಹಂತದ ಚಟುವಟಿಕೆಗಳು ಅಮೆರಿಕಾದ ಮಿಲಿಟರೀಕರಣವನ್ನು ವಿರೋಧಿಸುವುದಾಗಿತ್ತು. ಹವಾಯಿ ದ್ವೀಪಗಳಲ್ಲಿ ಅಮೆರಿಕದ ಮಿಲಿಟರಿ ಚಟುವಟಿಕೆ ಎಷ್ಟು ಜಾಸ್ತಿಯಾಗಿತ್ತೆಂದರೆ ಅಲ್ಲಿನ ಪ್ರತಿ 4 ಆರ್ಥಿಕ ಚಟುವಟಿಕೆಗಳಲ್ಲಿ ಒಂದು ಮಿಲಿಟರಿಗೆ ಸಂಬಂಧಿಸಿತ್ತು. 1979 ರಲ್ಲಿ ಜಿಮ್ ಮತ್ತವರ ಸಂಗಡಿಗರು, ದ್ವೀಪದಲ್ಲಿ ಹೆಚ್ಚಾಗುತ್ತಿದ್ದ ಅಣ್ವಸ್ತ್ರಗಳ ವಿರುದ್ಧ ಹೋರಾಟ ಪ್ರಾರಂಭಿಸಿದರು. ಆ ಸಂದರ್ಭದಲ್ಲಿ ಮಿಲಿಟರಿ ನೌಕೆಗಳು ನಿತ್ಯವೂ ಅಣ್ವಸ್ತ್ರಗಳನ್ನು ಸಾಗಿಸುತ್ತಿದ್ದವು. ಅಲ್ಲದೆ ಹಲವಾರು ಮಿಲಿಟರಿ ನೆಲೆಗಳಲ್ಲಿ ಅಣ್ವಸ್ತ್ರಗಳನ್ನು ಶೇಖರಿಸಿಡಲಾಗಿತ್ತು. ಮೊದಲಿಗೆ ಮಿಲಿಟರಿ ಸಿಬ್ಬಂದಿಗಳೊಡನೆ ಮಾತನಾಡುವ ಮೂಲಕ ಅಣ್ವಸ್ತ್ರಗಳ ಶೇಖರಣೆಯನ್ನು ನಿಲ್ಲಿಸಲು ಪ್ರಯತ್ನಪಟ್ಟರು. ಪ್ರಯತ್ನ ಫಲ ನೀಡದಿದ್ದರಿಂದ ಅಂತಿಮ ತೀರ್ಮಾನವನ್ನು ಪ್ರತಿಭಟನಾಕಾರರು ಮಿಲಿಟರಿಯವರಿಗೆ ತಿಳಿಸಿದರು. ತೀರ್ಮಾನಿಸಿದಂತೆ ಗೊತ್ತುಪಡಿಸಿದ ದಿನದಂದು, ಜಿಮ್ ಮತ್ತವರ ಸಂಗಡಿಗರು ಜನರ ಗುಂಪಿನೆದುರಲ್ಲೆ ನೀರಿಗೆ ಧುಮುಕಿ ಅಣ್ವಸ್ತ್ರ ಗಳನ್ನು ತುಂಬಿದ್ದ ಮಿಲಿಟರಿ ನೌಕೆಗಳತ್ತ ಈಜ ತೊಡಗಿದರು. ಹೋರಾಟಗಾರರನ್ನು ಬಂಧಿಸಿ ಮೂರು ವರ್ಷಗಳ ಕಾಲ ಜೈಲಿನಲ್ಲಿಟ್ಟರೂ ಹೋರಾಟ ನಿಲ್ಲದೆ ಮುಂದುವರೆಯಿತು. ಹೋರಾಟದ ಫಲವಾಗಿ ಯುದ್ಧ ನೌಕೆಗಳು ಅಣ್ವಸ್ತ್ರಗಳನ್ನು ಸಾಗಿಸಬಾರದೆಂಬ ನಿಯಮ ಜಾರಿಗೆ ಬಂತು. ಅಲ್ಲದೆ ಹವಾಯಿ ದ್ವೀಪದಲ್ಲಿರುವ 300 ಜಾಗಗಳನ್ನು ಅಣ್ವಸ್ತ್ರ ಮುಕ್ತವೆಂದು ಸ್ಥಳೀಯ ಸರ್ಕಾರ ಘೋಷಿಸಿದೆ. ಇದರಿಂದ ಸ್ಥಳೀಯ ಸರ್ಕಾರದ ನಿಲುವಿಗೆ ಮಿಲಿಟರಿ ತಕ್ಷಣವೆ ಸ್ಪಂದಿಸುವಷ್ಟು ಸೌಮ್ಯವಾಯಿತು ಎಂದುಕೊಳ್ಳುವಂತಿಲ್ಲ, ಮುಂದೆ ಹಲವಾರು ಸಂದರ್ಭಗಳಲ್ಲಿ ಸ್ಥಳೀಯ ಸರ್ಕಾರ ಮತ್ತು ಅಮೆರಿಕದ ಸರ್ಕಾರ (ಹವಾಯಿ ದ್ವೀಪ ಅಮೆರಿಕದ ವಸಾಹತುವಾಗಿದ್ದು ಅಮೆರಿಕದ ಆಡಳಿತಕ್ಕೊಳಪಟ್ಟಿದೆ) ನಡುವಿನ ಘರ್ಷಣೆಗೆ ಹೋರಾಟವು ಎಡೆ ಮಾಡಿಕೊಟ್ಟಿದೆ. ಹಾಗೂ ಕಾನೂನಿನನ್ವಯ ನಡೆಸುವ ಹೋರಾಟಕ್ಕೆ ಬುನಾದಿಯಾಯಿತು.

ಹವಾಯಿ ದ್ವೀಪದ ಸ್ಥಳೀಯರ ಭೂ ಹೋರಾಟದಲ್ಲಿ ಪಾಲ್ಗೊಂಡಿದ್ದರ ಅನುಭವವನ್ನು ಜಿಮ್ ಹಂಚಿಕೊಂಡರು. 80ರ ದಶಕದಲ್ಲಿ, ಗಾಲ್ಫ್ ಮೈದಾನ ಕಟ್ಟಲು 32 ಜನ ರೈತರನ್ನು ಅವರ

ನೆಲದಿಂದ ಎತ್ತಂಗಡಿ ಮಾಡಿದ ಸಂದರ್ಭದಲ್ಲಿ ಭೂ ಹೋರಾಟವು ಪ್ರಾರಂಭವಾಯಿತು. ಪ್ರವಾಸೋದ್ಯಮವನ್ನು ಅಭಿವೃದ್ಧಿಪಡಿಸ ಬೇಕೆಂಬ ಒತ್ತಡದಿಂದಾಗ ಸರ್ಕಾರವು ಸ್ಥಳೀಯರ ಹಕ್ಕುಗಳಿಗೆ ಸಂಚಕಾರ ತಂದುದಲ್ಲದೆ, ಪರಿಸರ ನಾಶಕ್ಕೆ ಕೈ ಹಾಕಿತು. ಪ್ರವಾಸೋದ್ಯಮವನ್ನು ಅಭಿವೃದ್ಧಿ ಪಡಿಸಬೇಕೆಂದು ಹವಾಯಿ ಮುಖ್ಯ ದ್ವೀಪದಿಂದ ವೈಕಿಕಿ ಬೀಚಿಗೆ ವಿದ್ಯುತ್ ಒದಗಿಸಲು ಕೇಬಲ್ ಸಂಪರ್ಕವನ್ನು ಕಲ್ಪಿಸುವ ಯೋಜನೆಯನ್ನು ಮುಂದಿಡಲಾಯ್ತು. ಈ ಯೋಜನೆಯು ದ್ವೀಪದ ಅತಿ ದೊಡ್ಡ ಮಳೆಕಾಡಿನ ನಾಶಕ್ಕೆ ಕಾರಣವಾಗಲಿತ್ತು. ಆ ಸಮಯದಲ್ಲಿ ವಿದ್ಯುತ್ ಯೋಜನೆಯ ವಿರುದ್ಧ ಹವಾಯಿ ಜನರು ಅಹಿಂಸಾತ್ಮಕ ಹೋರಾಟವನ್ನು ಪ್ರಾರಂಭಿಸಿದರು.

ಸ್ಥಳೀಯ ಭೂಹೋರಾಟದಲ್ಲಿ ಪಾಲ್ಗೊಂಡ ಶುರುವಿನಲ್ಲಿ ಅವರು ನಮ್ಮನ್ನು ಅನುಮಾನದಿಂದ ನೋಡಿದ್ದನ್ನು ಜಿಮ್ ಹೇಳಿದರು. ಅಮೆರಿಕಾದ ಬಿಳಿಯ ಮಿಷನರಿಗಳೊಂದಿಗಿನ ಕಹಿ ಅನುಭವವು ಅನುಮಾನದಿಂದ ನೋಡುವಂತೆ ಮಾಡಿತ್ತು. ನಮ್ಮ ಹೋರಾಟಕ್ಕಾಗಿ ನಾವು ಬಂಧಿಲಸ್ಪಟ್ಟಿದ್ದು ಮತ್ತು ಜೈಲಿನ ಅನುಭವಗಳನ್ನು ಹಂಚಿಕೊಂಡಿದ್ದರಿಂದ ಅವರು ನಮ್ಮನ್ನು ವಿಶ್ವಾಸಕ್ಕೆ ತೆಗೆದುಕೊಂಡರು ಎಂದು ಹೇಳಿದರು.

ಅವರ ಭೂ ಹೋರಾಟದಲ್ಲಿ ಪಾಲ್ಗೊಳ್ಳಲು ಪ್ರಾರಂಭಿಸಿದ ಮೇಲೆ ಆ ನೆಲದೊಂದಿಗೆ ನಮ್ಮ ಒಡನಾಟ ಹೆಚ್ಚಾಯಿತು. ಟಾರೊ ಎಂಬ ಸಸ್ಯದ ಬೇರು ಅಲ್ಲಿನವರ ಮುಖ್ಯ ಸಾಂಪ್ರದಾಯಿಕ ಆಹಾರ. ಟಾರೊ ಸಸ್ಯವನ್ನು ಬೆಳೆಯುವ ನಮ್ಮ ನೆಲವನ್ನು ಮರಳಿ ಪಡೆಯಬೇಕೆಂಬ ಹಾಡು ಹುಟ್ಟಿಕೊಂಡಿದ್ದು, ಮಿಲಿಟರಿ ಮತ್ತು ಪ್ರವಾಸೋದ್ಯಮವು ನಿರಂತರವಾಗಿ ಸ್ಥಳೀಯ ಜೀವಪರ ಸಂಸ್ಕೃತಿಯ ಮೇಲೆ ನಡೆಸುತ್ತಿರುವ ಆಕ್ರಮಣವನ್ನು ಪ್ರತಿಭಟಿಸುವ ಸಲುವಾಗಿ ಎಂದು ಹೇಳಿದರು.

ಸ್ಥಳೀಯರ ಭೂ ಹೋರಾಟದಲ್ಲಿ ಸಂಪೂರ್ಣವಾಗಿ ತೊಡಗಿಕೊಳ್ಳಬೇಕೆಂದರೆ ನಗರದ ಅಕೆಡೆಮಿಕ್ ಬದುಕನ್ನು ತೊರೆಯುವುದೊಂದೆ ಮಾರ್ಗವೆನಿಸಿದ್ದರಿಂದ ನಾವೆಲ್ಲ ಸ್ನೇಹಿತರು ದ್ವೀಪದಲ್ಲೆ ಬದುಕಲು ಪ್ರಾರಂಭಿಸಿದೆವು. ನಮ್ಮದು ಸಂಘ ಜೀವನ, ನಾವಿರುವಲ್ಲಿ ವಿದ್ಯುತ್ ಉಪಯೋಗಿಸುವುದಿಲ್ಲ, ಸೌರಶಕ್ತಿಯನ್ನು ಬಳಸುತ್ತೇವೆ. ಮಳೆ ನೀರನ್ನು ಶೇಖರಿಸಿ ವ್ಯವಸಾಯ ಮಾಡುತ್ತೇವೆ. ಹಣವನ್ನಾಧರಿಸಿದ ಆರ್ಥಿಕ ವ್ಯವಸ್ಥೆಯನ್ನು ಸಂಪೂರ್ಣವಾಗಿ ತೊರೆದಿದ್ದೇವೆ. ನಮ್ಮ ನೆಲದಲ್ಲಿ ಬೆಳೆಯುವ 2/3 ಭಾಗದಷ್ಟು ಬೆಳೆಯನ್ನು ನಾವು ಉಪಯೋಗಿಸಿಕೊಂಡು ಉಳಿದ್ದದ್ದನ್ನು ಬೇರೆ ಅಗತ್ಯ ವಸ್ತುಗಳನ್ನು ಕೊಳ್ಳಲು ಬದಲಾಯಿಸಿಕೊಳ್ಳುತ್ತೇವೆ. ಈ ರೀತಿಯ ಕೃಷಿ ಆಧಾರಿತ ಸಂಘ ಜೀವನವೆ ಅಹಿಂಸಾತ್ಮಕ, ಶಾಂತಿಯುತ ಹೋರಾಟಗಳಿಗೆ ಆಧಾರ ಎಂದು ಜಿಮ್ ಹೇಳಿದರು.

ಜಿಮ್ ಅವರು ಹವಾಯಿ ದ್ವೀಪದ ಜನರು ತಮ್ಮ ಸಾರ್ವಭೌಮತ್ವಕ್ಕಾಗಿ ನಡೆಸಿರುವ ಹೋರಾಟಗಳ ಐತಿಹಾಸಿಕ ನೆಲೆಯನ್ನು ವಿವರಿಸಿದರು. ಇತಿಹಾಸದ ಪುಸ್ತಕಗಳ ಪ್ರಕಾರ ಅಮೆರಿಕಾವು 1898 ರಲ್ಲಿ ಹವಾಯಿ ದ್ವೀಪವನ್ನು ತನ್ನ ಆಳ್ವಿಕೆಗೊಳಪಡಿಸಿಕೊಂಡಿತು. ಆದರೆ ಯಾವುದೆ ಸ್ವಾಧೀನತೆಗೆ ಅಮೆರಿಕದ ಸೆನೆಟ್ಟಿನ 2/3 ರಷ್ಟು ಬಹುಮತ ಸಿಗಬೇಕು. ಆದರೆ ಸೆನೆಟ್ಟಿನಲ್ಲಿಟ್ಟು ಬಹುಮತವನ್ನೆ ಸರ್ಕಾರ ಪಡೆದುಕೊಂಡಿಲ್ಲ ಎಂದು ಹೇಳಿದರು. ಹವಾಯಿ ದ್ವೀಪಗಳಲ್ಲಿ 8ನೆ ದೊಡ್ಡ ದ್ವೀಪವಾದ ಕಹೊಲ್ಯವಿ ದ್ವೀಪವನ್ನು ಕುರಿತು ಜಿಮ್ ಹೇಳಿದರು.

ಈ ದ್ವೀಪವನ್ನು ಶಸ್ತ್ರಾಸ್ತ್ರ ಪರೀಕ್ಷೆಗೆ ಬಳಸಿಕೊಳ್ಳ ಲಾಗುತ್ತಿತ್ತು. ಎಪ್ಪತ್ತರ ದಶಕದ ನಡುವಿನಲ್ಲಿ ದ್ವೀಪದ ಜನರು ತಮ್ಮ ನೆಲವನ್ನು ಬಾಂಬ್ ಪರೀಕ್ಷೆಗೆ ಬಳಸಿಕೊಳ್ಳುವುದರ ವಿರುದ್ಧ ಪ್ರತಿಭಟಿಸಿದರು. ಆ ಹೋರಾಟದಲ್ಲಿ ನನ್ನ ಇಬ್ಬರು ಗೆಳೆಯರು ಪ್ರಾಣತೆತ್ತರು. ಅಂತಿಮವಾಗಿ ಸುಮಾರು 80000 ಪರೀಕ್ಷೆ ನಡೆಸಿದ್ದ ಬಾಂಬ್‌ಗಳನ್ನು ಐದು ಕೋಟಿ ಡಾಲರ್ ಖರ್ಚು ಮಾಡಿ ಸರ್ಕಾರ ಅಲ್ಲಿಂದ ತೆಗೆಯಿಸಿತು.

ಅಮೆರಿಕದಲ್ಲಿ ಸಾರ್ವಜನಿಕ ಅಭಿಪ್ರಾಯವು ಬಲಪಂಥೀಯ ವಿಚಾರಗಳತ್ತ ಹೆಚ್ಚೆಚ್ಚು ವಾಲುತ್ತಿರುವುದರಿಂದ, ಯುದ್ಧ ವಿರೋಧಿ, ಅಣುವಿರೋಧಿ ಹೋರಾಟಗಳ ಕುರಿತು-ಮಾಧ್ಯಮಗಳು ದಾಖಲಿಸುವುದು ಕಡಿಮೆಯಾಗುತ್ತಿದೆ. ಇಂತಹ ಸಂದರ್ಭಗಳಲ್ಲಿ ಸ್ಥಳೀಯ ಹಂತದಲ್ಲಿ ನಡೆಯುವ ಚಟುವಟಿಕೆಗಳು ಹೆಚ್ಚು ಪ್ರಾಮುಖ್ಯತೆ ಪಡೆಯುತ್ತವೆ. ನ್ಯಾಯಾಂಗವೇ ಹೋರಾಟಗಳನ್ನು ಬಲವಂತವಾಗಿ ಹತ್ತಿಕ್ಕುತ್ತಿದೆ. ಅಣು ವಿರೋಧಿ ಹೋರಾಟಕ್ಕಾಗಿ ನಮ್ಮ ಸ್ನೇಹಿತರೊಬ್ಬರು 14 ವರ್ಷದ ಜೈಲು ಶಿಕ್ಷೆಯನ್ನು ಈಗಲೂ ಅನುಭವಿಸುತ್ತಿದ್ದಾರೆ.

ಭಾರತದ ಭೇಟಿ ನನಗೆ ತುಂಬಾ ವಿಶಿಷ್ಟವಾದುದು ಏಕೆಂದರೆ ನಾನು ಗಾಂಧಿಯಿಂದ ಪ್ರಭಾವಿತನಾದವನು. ಇಲ್ಲಿ ಭಾರತದಲ್ಲಿ ಸ್ವಾಯತ್ತತೆಗಾಗಿ ನಡೆಸುತ್ತಿರುವ ಹೋರಾಟಗಳು ನನ್ನನ್ನು ಪ್ರಭಾವಿಸಿವೆ. ನರ್ಮದಾ ಉಳಿಸಿ ಹೋರಾಟವನ್ನು ಅವರು ಉದಾಹರಿಸುತ್ತ, ಈ ಹೋರಾಟವು ಹವಾಯಿದ್ವೀಪದ ಜನರು ತಮ್ಮ ನೆಲದ ಉಳಿವಿಗಾಗಿ ನಡೆಸಿರುವ ಹೋರಾಟದಂತೆ ಎಂದು ಹೇಳಿದರು. ಈ ರೀತಿಯ ಹೋರಾಟಗಳ ನಡುವೆ ಸಂಪರ್ಕ, ಬೆಂಬಲ ಕಲ್ಪಿಸುವುದು ತುಂಬಾ ಅಗತ್ಯವೆಂದು ಒತ್ತಿ ಹೇಳಿದರು. ಭೂತಾಯಿಯ ಮೇಲಿನ ಆಕ್ರಮಣವನ್ನು ಅಹಿಂಸಾತ್ಮಕವಾಗಿ ವಿರೋಧಿಸುವುದೇ ನನ್ನ ಆಧ್ಯಾತ್ಮಿಕತೆ ಎಂದು ಹೇಳಿದರು. ಸಹಜ ಕೃಷಿ, ಪರಿಸರ ಉಳಿವಿಗಾಗಿ ನಾವು ನಡೆಸುತ್ತಿರುವ ಹೋರಾಟ, ಚಟುವಟಿಕೆಗಳನ್ನು ನಾವು ಭೂತಾಯಿಯನ್ನು ಗೌರವಿಸುವು ದರಿಂದಾಗಿ ಮಾಡುತ್ತಿರುವುದರಿಂದ ಅವೆಲ್ಲವೂ ಆಧ್ಯಾತ್ಮಿಕ ಚಟುವಟಿಕೆಗಳೇ. ಆಧ್ಯಾತ್ಮಿಕ ಹುಡುಕಾಟಕ್ಕೆ ಹೋರಾಟಗಳಲ್ಲೂ ಉತ್ತರ ಕಂಡುಕೊಳ್ಳಬಹುದು. ❑

ವರದಿ: ಮೋಹನ್ ಮಾಣಿ

# ಹಿರೋಶಿಮಾ, ನಾಗಸಾಕಿ ಮರುಕಳಿಸದಿರಲಿ

**65** ವರ್ಷದ ಹಿಂದೆ ಮೊತ್ತ ಮೊದಲ ಬಾರಿಗೆ ಅಣುಬಾಂಬ್ ಪ್ರಯೋಗಿಸಿ ಹಿರೋಶಿಮಾ, ನಾಗಸಾಕಿಯ ಲಕ್ಷಾಂತರ ಜನರನ್ನು ಬಲಿ ತೆಗೆದುಕೊಂಡು ಅಲ್ಲಿನ ಪರಿಸರವನ್ನೇ ಇನ್ನಿಲ್ಲದಂತೆ ನಿರ್ನಾಮ ಮಾಡಿ ಬೀಗಿದ ಅಮೇರಿಕಾ ಸರ್ಕಾರ ಈಗ ತಾರ ಸಮರಕ್ಕೆ ಸಜ್ಜಾಗಿದೆ. N.M.Dಎಂದು ಕರೆಯಲಾಗುವ ಅತ್ಯಾಧುನಿಕ, ಹೈಟೆಕ್ ಯುದ್ಧ ತಂತ್ರಜ್ಞಾನವು ಆ ದೇಶದ ಅಧಿಕಾರ ದಾಹಕ್ಕೆ ಹಿಡಿದ ಕನ್ನಡಿ ಯಾಗಿದೆ. ಆದರೆ ಜನರ ಮನಸ್ಸಿನಿಂದ ಹಿರೋಶಿಮಾದ ದುರಂತವಿನ್ನೂ ಮರೆಯಾಗಿಲ್ಲ. ಜಗತ್ತಿನಾದ್ಯಂತ ಹಿರೋಶಿಮಾ ದಿನದಂದು ನಡೆಯುವ ಶಾಂತಿಯುತ ಪ್ರತಿಭಟನೆಗಳೇ ಇದಕ್ಕೆ ಸಾಕ್ಷಿ.

ಉಪವಾಸ' ಕಾರ್ಯಕ್ರಮವನ್ನು ಏರ್ಪಡಿಸಿತ್ತು. ಆ ದಿವಸ ಬೆಳಗ್ಗೆ 9-30ಕ್ಕೆ ಎಲ್ಲರೂ ಎಂ.ಜಿ. ರಸ್ತೆಯಲ್ಲಿರುವ ಗಾಂಧಿ ಪ್ರತಿಮೆಯ ಬಳಿ ಉಪವಾಸ ಸತ್ಯಾಗ್ರಹ ಮಾಡಿದರು. ಯುದ್ಧ ವಿರೋಧಿ, ಬಾಂಬ್ ವಿರೋಧಿ ಪೋಸ್ಟರ್‌ಗಳನ್ನು ಮತ್ತು ಹಿರೋಶಿಮಾ ದುರಂತ ಕುರಿತ ಛಾಯಾ ಚಿತ್ರಗಳನ್ನು ಮತ್ತು ಪೋಸ್ಟರ್‌ಗಳನ್ನು ಪ್ರದರ್ಶಿಸಲಾಯಿತು. ಅನೇಕ ಶಾಲಾ ಮಕ್ಕಳು ಕಾರ್ಯಕ್ರಮದಲ್ಲಿ ಉತ್ಸಾಹದಿಂದ ಭಾಗವಹಿಸಿ ಶಾಂತಿ ಗೀತೆಗಳನ್ನು ಹಾಡಿದರು. ಶಾಂತಿಯ ಸಂಕೇತವಾಗಿ ಬಿಳಿಯ ರಿಬ್ಬನ್‌ಗಳನ್ನು ಸಾರ್ವಜನಿಕರಿಗೆ ತೊಡಿಸಿದರು. ಪೇಪರ್‌ನಲ್ಲಿ ಕೊಕ್ಕರೆಗಳನ್ನು ಮಾಡಿ ಹಂಚಿದರು.

ಅದೇ ದಿವಸ ಸಂಜೆ 5 ಗಂಟೆಗೆ ಕೆ.ಜಿ. ರಸ್ತೆಯ ಬನ್ನಪ್ಪ ಪಾರ್ಕಿನಲ್ಲಿ ಶಾಂತಿ ಗೀತೆಗಳ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಮಹಾಬೋಧಿ ಸೊಸೈಟಿಯ ಧಮ್ಮಾಚಾರಿಗಳ ಪ್ರಾರ್ಥನೆಯ ಮೂಲಕ ಕಾರ್ಯಕ್ರಮ ಪ್ರಾರಂಭವಾಯಿತು. ಮೌಂಟ್ ಕಾರ್ಮೆಲ್ ಕಾಲೇಜಿನ ವಿದ್ಯಾರ್ಥಿಗಳು, ಭಾರತೀಯ ಜ್ಞಾನ ವಿಜ್ಞಾನ ಸಮಿತಿಯವರು, ಶಾಲಾ ಮಕ್ಕಳು ಹಾಗೂ ಇನ್ನಿತರ ವ್ಯಕ್ತಿಗಳು ಶಾಂತಿ ಗೀತೆಗಳನ್ನು ಮನಮುಟ್ಟುವಂತೆ ಹಾಡಿದರು. ಸೇಂಟ್ ಜೋಸೆಫ್ಸ್ ಕಾಲೇಜಿನ ವಿದ್ಯಾರ್ಥಿಗಳು, ಚೈತನ್ಯಯುವತಿಯ ಸಂಘದವರು ಕಿರುನಾಟಕಗಳನ್ನು ಪ್ರದರ್ಶಿಸಿದರು. ಮಳೆ ಸುರಿದರೂ



ಸುಡುಗಾಡಾದ ಹಿರೋಶಿಮಾ
ನವೆಂಬರ್ 1945

ಬೆಂಗಳೂರಿನ ಅಣ್ವಸ್ತ್ರೀಕರಣ ವಿರೋಧಿ ವೇದಿಕೆಯು ಆಗಸ್ಟ್ 6 ಹಿರೋಶಿಮಾ ದಿನವನ್ನು ಶಾಂತಿಯ ದಿನವಾಗಿ ಆಚರಿಸಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಆಗಸ್ಟ್ 6ರ ಕಾರ್ಯಕ್ರಮಕ್ಕೆ ಜನರನ್ನು ಸಂಘಟಿಸಲು ವೇದಿಕೆಯ ಸದಸ್ಯರು ವಿವಿಧ ಶಾಲಾ ಕಾಲೇಜುಗಳಿಗೆ ಹೋಗಿ ಹಿರೋಶಿಮಾ ಕುರಿತ ಸ್ಲೈಡ್ ಶೋ, ಪೋಸ್ಟರ್ ಪ್ರದರ್ಶನ, ಕರಪತ್ರ, ಚರ್ಚೆ, ಸಿನಿಮಾ ಪ್ರದರ್ಶನಗಳನ್ನು ನಡೆಸಿದರು. ಆಗಸ್ಟ್ 6ರಂದು ವೇದಿಕೆಯು, [illegible] [illegible] ಸಹಕಾರದೊಂದಿಗೆ [illegible]

ಸಹ ಕಾರ್ಯಕ್ರಮ ನಿಲ್ಲದೆ ಮುಂದುವರೆಯಿತು. ಕೊನೆಯಲ್ಲಿ ಎಲ್ಲರೂ ಉರಿವ ಮೊಂಬತ್ತಿಗಳನ್ನು ಹಿಡಿದುಕೊಂಡು 'ಜಗವು ಬೆಳಗಲಿ' ಎಂದು ಹಾಡುವ ಮೂಲಕ ಯುದ್ಧ ಬೇಡ ಬುದ್ಧ ನಗಲಿ 'ಬಾಂಬು ಬೇಡ ಅನ್ನಬೇಕು' ಎಂಬ ಘೋಷಣೆಯೊಂದಿಗೆ ಕಾರ್ಯಕ್ರಮ ಕೊನೆಯಾಯಿತು. ಆ ಕಾರ್ಯಕ್ರಮಕ್ಕೆಂದು ಪ್ರಕಟಿಸಿದ ಕರಪತ್ರವನ್ನು ಓದುಗರಿಗಾಗಿ ಪ್ರಕಟಿಸಿದ್ದೇವೆ.

**ಇಂದಿಗೆ 56 ವರ್ಷಗಳ ಹಿಂದೆ ಜಪಾನ್ ದೇಶದ ಹಿರೋಶಿಮಾ ನಗರವು, ಜಗತ್ತಿನ ಮೊತ್ತ ಮೊದಲ ಪರಮಾಣು ಬಾಂಬ್ ದಾಳಿಯಲ್ಲಿ ಬೂದಿಯಾಯಿತು. ಮೂರು ದಿನಗಳ ನಂತರ ಆಗಸ್ಟ್ 9 ರಂದು ಇದೆ ದುರಂತಕ್ಕೆ ಮತ್ತೊಂದು ನಗರ ನಾಗಸಾಕಿ ಈಡಾಯಿತು. ಬಾಂಬ್ ದಾಳಿಗೆ 3,00,000 ಮುಗ್ಧ ನಾಗರೀಕರು ಬಲಿಯಾದರು. ಇಡೀ ಪರಿಸರವೇ ನಾಶವಾಯಿತಲ್ಲದೆ, ಮುಂದೆ ಹುಟ್ಟಲಿರುವ ಜನಾಂಗವೇ ಊನಗೊಂಡಿತು.**

ಪುಟ್ಟ ಹುಡುಗಿ ಸದಾಕೊ ಬಾಂಬ್ ದಾಳಿಯಲ್ಲಿ ಬದುಕುಳಿದರೂ ಮುಂದೆ ಅಣುವಿಕಿರಣದಿಂದಾಗಿ ಕ್ಯಾನ್ಸರ್ ರೋಗಕ್ಕೆ ತುತ್ತಾದಳು. ಸಾವಿರ ಕಾಗದದ ಕೊಕ್ಕರೆಗಳನ್ನು ಮಾಡಿ ಪೂರೈಸಿದರೆ, ಆ ಕೊಕ್ಕರೆಗಳು ಖಾಯಿಲೆಯಿಂದ ಕಾಪಾಡುತ್ತವೆಂದು, ಸೌಭಾಗ್ಯವನ್ನು ನೀಡುತ್ತವೆಂಬುದು ಜಪಾನಿಯರ ಪ್ರಾಚೀನ ನಂಬಿಕೆ. ಸದಾಕೊ ಒಂದೊಂದೆ ಕೊಕ್ಕರೆಗಳನ್ನು ಮಾಡುತ್ತಾ ಹೋದಳು. ಆ ಕೊಕ್ಕರೆಗಳಿಗೆ ಹೇಳಿದಳು "ನಿಮ್ಮ ಮೇಲೆ ಶಾಂತಿ ಎಂದು ಬರೆಯುವೆ, ನೀವು ವಿಶ್ವದೆಲ್ಲೆಡೆ ಹಾರಾಡಿ". ಆದರೆ ಸದಾಕೊ ಒಂಬೈನೂರಾ ಅರವತ್ತ ನಾಲ್ಕು ಕೊಕ್ಕರೆಗಳನ್ನು ಮಾಡಿ ಅಕ್ಟೋಬರ್ 25, 1955 ರಲ್ಲಿ ಕ್ಯಾನ್ಸರ್‌ಗೆ ಬಲಿಯಾದಳು.



ಸದಾಕೊ



ಕಾಗದದ ಕೊಕ್ಕರೆಗಳು

ಇಂದು ಸಾವಿರಾರು ಹಿರೋಶಿಮಾ, ನಾಗಾಸಾಕಿಗಳನ್ನು ಸೃಷ್ಟಿಸುವಷ್ಟು, ಭೂಮಿಯನ್ನು 30 ಬಾರಿ ಭಸ್ಮ ಮಾಡುವಷ್ಟು ಅಣ್ವಸ್ತ್ರಗಳನ್ನು ಜಗತ್ತು ಹೊಂದಿದೆ. 1998 ರಲ್ಲಿ ಭಾರತ ಮತ್ತು ಪಾಕಿಸ್ತಾನ ಸರ್ಕಾರಗಳು ಅಣ್ವಸ್ತ್ರ ರಾಷ್ಟ್ರಗಳ ಕ್ಲಬ್‌ನಲ್ಲಿ ಸೇರಿಕೊಂಡವು.

ಶಾಂತಿಯನ್ನು ಪ್ರೀತಿಸುವ, ಅಣ್ವಸ್ತ್ರಗಳ ಭೀತಿಯಿಂದ ಮುಕ್ತವಾದ ಜಗತ್ತಿನಲ್ಲಿ ನಮ್ಮ ಮಕ್ಕಳು ಬದುಕಲೆಂದು ಬಯಸುವವರೆಲ್ಲ ನಮ್ಮೊಂದಿಗೆ ಬನ್ನಿ. ಪುಟಾಣಿ ಸದಾಕೊಳ ಕನಸನ್ನು ನನಸಾಗಿಸಲು ಅಣ್ವಸ್ತ್ರೀಕರಣ ವಿರೋಧಿ ವೇದಿಕೆಯ ಶಾಂತಿ ಸಮಾರಂಭಕ್ಕೆ ಬನ್ನಿ. ❑

## ನೋವು

ಚುಚ್ಚಿ ಚುಚ್ಚಿ ಇರಿವ ಚಾಕುವಿನ ಇರಿತ
ಸಹಿಸಲಾರೆ! ನೀ ಮಾತಿನ ಕೊರೆತ
ರಾತ್ರಿಯ ಭೀಕರತೆ
ಹಗಲಿನ ಬೆಣಚು ಕಿಂಡಿಗಾಗಿ ಎಳೆತ
ಆದರೆಲ್ಲಿ?
ಮುಗುದೆ, ಕೊನೆ ನಿನ್ನ ಸೆಳೆತ?
ಬೆಳಗಿಗೇ ಹೊಟ್ಟೆಯ ಹಸಿವಿನ ಕುಣಿತ
ಮೈ ಮುರಿದು ಬಾಡಿ ಬಳಲಿಯೇ ನೆಗೆತ

ದುಂದು ವೆಚ್ಚದ ಆಣತಿ ಒಡವೆಗೆ ಹೆಣೆತ
ಏಲೇ ಹೆಂಗ್ಸೆ! ನೀನ್ಯಾರೆಂಬ ಕೂಗಿಗೇ
ಉತ್ತರವೇ ಕಣ್ಣೀರು
ಸೆರಗ ಮರೆಗೆ ಬಗಲಿಗೆ ಜೋತು
ತೊಗಲುಗಳೇ ಬಲಿಯು
ಸಹಿಸಲಾರೆ ನೀ ಕೊನೆಯುಸಿರು
ಯುದ್ಧದಲ್ಲೂ ಚಾಕುವಿನ ಇರಿತ

✍ ಶ್ರೀಮತಿ ಕಲ್ಪನಾಭಟ್ಟ.

# ನಾ ನೋಡಿದ ಒಂದು ಕಿರುಚಿತ್ರ....

ಮೂರು ಸ್ನೇಹಿತೆಯರ ನಡುವೆ ಕೆ. ಪಿ. ಶಶಿಯವರು ಹೆಣೆದಿರುವ ಒಂದು ಕಿರುಚಿತ್ರ ಇಳಯಂ ಮುಳ್ಳುಂ (ಎಲೆ ಮತ್ತು ಮುಳ್ಳು)ನಲ್ಲಿ ಆ ಸ್ನೇಹಿತೆಯರು ನಗುನಗುತ್ತಾ, ಹಕ್ಕಿಗಳಂತೆ ಹಾರಾಡುತ್ತಿದ್ದವರ ರೆಕ್ಕೆಗಳನ್ನು ಕತ್ತರಿಸಲು ಅವರ ಊರಿನ ಗಂಡಸರು ನಡೆಸಿದ ಸಂಚು ನಿಜಕ್ಕೂ ಕ್ರಿಮಿನಲ್ ಎಂದೆನಿಸುತ್ತದೆ.

ಹಚ್ಚ ಹಸುರಿನ ಮಡಿಲಲ್ಲಿ ಆ ಮೂರು ಗೆಳತಿಯರು ಹಾರುತ್ತಾ ಕುಣಿಯುತ್ತಾ ಮನೆಗೆಲಸಗಳನ್ನೆಲ್ಲ ಮುಗಿಸಿ ಮೂರು ಜನ ಸೇರಿ ನೇಯುವ ಕೆಲಸಕ್ಕೆ ಹೋಗುತ್ತಿದ್ದರು. ಇವರಲ್ಲಿ ಒಬ್ಬ ಸ್ನೇಹಿತೆಗೆ ಮದುವೆ ನಿಶ್ಚಯವಾಗುತ್ತದೆ. ಅವಳಿಗೆ ತನ್ನ ಮದುವೆಯ ಬಗ್ಗೆ ಇದ್ದ ಆಸೆ, ಗಂಡನ ಬಗೆಗಿದ್ದ ಎಲ್ಲ ಭಾವನೆಗಳನ್ನು ತನ್ನ ಸ್ನೇಹಿತೆಯೊಬ್ಬಳೊಂದಿಗೆ ಹೇಳಿಕೊಳ್ಳುತ್ತಾ ತುಂಬಾ ಸಂತೋಷ ಪಡುತ್ತಾಳೆ. ಕೊನೆಗೆ ಮದುವೆಯಾಗಿ ಸಿಟಿಗೆ ಹೊರಟು ಹೋಗುತ್ತಾಳೆ. ಸ್ವಲ್ಪ ದಿನಗಳ ನಂತರ ಅವಳಿಂದ ಒಂದು ಕಾಗದ ಬರುತ್ತದೆ ಅದರಲ್ಲಿ ಅವಳು ಕಂಡು ಕನಸು ನುಚ್ಚುನೂರಾಗಿರುವುದನ್ನು ಬರೆದಿರುತ್ತಾಳೆ.

ವರದಕ್ಷಿಣೆ ಇನ್ನು ಹೆಚ್ಚು ತರುವಂತೆ ಚಿತ್ರಹಿಂಸೆಯನ್ನು ಕೊಡುತ್ತಿರುವುದಾಗಿ ಅವಳ ತಂದೆ-ತಾಯಿಯ ಮನೆಯಲ್ಲಿ ತಿಳಿಸುತ್ತಾಳೆ. ಆದರೆ ಪ್ರಯೋಜನವೇನು? ಅವಳಿಗೆ ತನ್ನ ತವರಿನಿಂದ ಬಂದ ಪ್ರತಿಕ್ರಿಯೆ "ನೀನು ಈಗ ಮದುವೆಯಾಗಿದ್ದೀಯಾ ತಂದೆ-ತಾಯಿ, ಗಂಡ ಎಲ್ಲರು ನಿನ್ನ ಗಂಡನೇ, ಅವರು ಹೇಳಿದಂತೆ ಕೇಳಿಕೊಂಡಿರು" ಎಂದು ಹೇಳುತ್ತಾರೆ. ಇದರ ಅರ್ಥ ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ಎಂಬಂತೆ.

ಕೊನೆಗೆ ಅವಳು ತವರಿನಿಂದ ವಿಧಿಯಿಲ್ಲದೆ ಗಂಡನ ಮನೆಗೆ ಹೊರಡುತ್ತಾಳೆ. ಸ್ವಲ್ಪ ದಿನಗಳ ನಂತರ ಅವಳಿಂದ ಒಂದು ಸಂದೇಶ ಬರುತ್ತದೆ. ಅದು "ನಾನು ಹಿಂಸೆ ತಾಳಲಾರದೇ ಬೆಂಕಿಗೆ ಆಹುತಿಯಾದೆ" ಎಂದು.

ಮತ್ತೊಬ್ಬ ಸ್ನೇಹಿತೆ ಮತ್ತು ಅವರಲ್ಲಿ ಹೆಚ್ಚು ಧೈರ್ಯ ಹೊಂದಿದ್ದ ಸ್ನೇಹಿತೆಯನ್ನು ನೋಡಲು ಒಬ್ಬ ಗಂಡು ಮತ್ತು ಅವನ ತಂದೆ ಬರುತ್ತಾರೆ. ಅವರು ಇವಳನ್ನು ಕೆಲವೊಂದು ಪ್ರಶ್ನೆಗಳನ್ನು ಮಾಡುತ್ತಾರೆ. ಅದು ಬಾಯಿಂದ ಉತ್ತರಿಸುವ ಪ್ರಶ್ನೆಗಳಲ್ಲ. ದೈಹಿಕವಾಗಿ ಮಾಡಿತೋರಿಸುವಂತಹ ಪ್ರಶ್ನೆಗಳಾಗಿದ್ದವು. ಅವಳ ಸುತ್ತಾ ತಿರುಗಿ ಅಂಗಗಳಲ್ಲೆ ಸರಿ ಇದೆಯೇ ಇಲ್ಲವೆ ಎಂದು ನೋಡಿದರು. ನಡೆದು ತೋರಿಸು ಮಾತುನಾಡು ಹೀಗೆ ಹಲವು. ನಂತರ ಹುಡುಗ ಅವಳೊಂದಿಗೆ ಮಾತಾನಾಡಿಸಲು ಇಷ್ಟಪಟ್ಟಾಗ ಅವಳು ಅವನಿಗೆ ಬಯ್ಯುತ್ತಾಳೆ ನನ್ನ ಹಲ್ಲು ನೋಡು ಕಣ್ಣು ನೋಡು ಎಂದು ವಿಚಿತ್ರವಾಗಿ ಮಾಡಿ ತೋರಿಸುತ್ತಾಳೆ. ಕೊನೆಗೆ ಗಂಡು ಅಲ್ಲಿಂದ ಹೊರಟೇ ಹೋಗುತ್ತಾನೆ.

ಈ ಮೂರು ಸ್ನೇಹಿತೆಯರಲ್ಲಿ ಇಬ್ಬರು ಬಸ್ಸಿನಲ್ಲಿ ಹೋಗುವಾಗ ಲೈಂಗಿಕವಾಗಿ ಶೋಷಣೆಗಳಿಗೆ ಒಳಪಡುತ್ತಾರೆ. ಆ ಊರಿನ ದೊಡ್ಡ ವ್ಯಕ್ತಿಯೊಬ್ಬ ಅವಳ ಮೇಲೆ ಕೈಹಾಕುತ್ತಾನೆ. ಅದನ್ನು ವಿರೋಧಿಸಿದ ಆ ಸ್ನೇಹಿತೆಯರನ್ನು ಬಜಾರಿಗಳು, ಗಂಡುಬೀರಿಗಳು ಎಂದು ಜನ ಆಡಿಕೊಳ್ಳುತ್ತಾರೆ. ಮತ್ತೆ ಅಂಗಡಿಗೆ ಸರಕುಗಳನ್ನು ತರಲು ಹೋದಾಗ ಅಲ್ಲಿಯು ಅವರು ಕೈಮುಟ್ಟಿ ಚಿಲ್ಲರೆ ಹಣ ಕೊಡುವುದು. ಈ ರೀತಿ ಹಲವು.

ಈ ರೀತಿ ಅವರು ಗಂಡಸರು ಎಂದುಕೊಂಡು ಗರ್ವದಿಂದ ತಮ್ಮ ದರ್ಪವನ್ನು ತೋರಿಸುತ್ತಿದ್ದವರ ವಿರುದ್ಧ ತಿರುಗಿ ಬಿದ್ದಾಗ, ಅವರು ಇವರ ಬಗ್ಗೆ ಅಪಪ್ರಚಾರ ಮಾಡಲು ಪ್ರಾರಂಭಿಸಿದರು. ರಸ್ತೆಯಲ್ಲಿ ಹೋಗುತ್ತಿರುವಾಗ ಅವರಿಗೆ ತಡೆಹಾಕಿ ಅವರಿಗೆ ಕುಡಿಯಲು ತಿಳಿಸುತ್ತಾರೆ. ಅದಕ್ಕೆ ಅವರಲ್ಲಿ ಒಬ್ಬಳು ಚಪ್ಪಲಿಯನ್ನು ತೋರಿಸಿ ಮುಖಕ್ಕೆ ಉಗಿಯುತ್ತಾಳೆ. ಅವನು ತನ್ನ ಕೈಯಲ್ಲಿದ್ದ ಸಾರಾಯಿ ಅವಳ ಮೇಲೆ ಚೆಲ್ಲುತ್ತಾನೆ. ಅಲ್ಲಿಂದ ಅವರು ಹೊರಡುತ್ತಿರುವಾಗ ರಸ್ತೆಯಲ್ಲಿ ಅಡ್ಡ ಸಿಕ್ಕ ಕೆಲವೊಂದು ಗಂಡಸರು ಸಾರಾಯಿ ವಾಸನೆ ಬರುತ್ತಿದೆ ಇವರು ಕುಡಿದಿದ್ದಾರೆ ಎಂದು ಊರಿನಲ್ಲಿರುವರೆಲ್ಲರಿಗೂ ಪ್ರಚಾರ ಮಾಡುತ್ತಾರೆ. ಕೊನೆಗೆ ಇವಳ ತಂದೆಯು ಕುಡುಕ ಇವಳು ಕುಡಿಯುತ್ತಾಳೆ ಎಂದು ಅವರ ತಂದೆಯ ಎದುರು ಹೇಳುತ್ತಾರೆ.

ಈ ರೀತಿ ಅವರ ಬಗ್ಗೆ ಅಪಪ್ರಚಾರವನ್ನು ಮಾಡಿದ ನಂತರವು ಸಮಾಧಾನ ಸಿಗದ ಒಬ್ಬನು ಅವರಲ್ಲಿ ಧೈರ್ಯವಂತೆಯಾಗಿದ್ದ ಒಬ್ಬಳ ಬಗ್ಗೆ ನಡತೆಗೆಟ್ಟವಳು, ಎಂದು ಅವಳ ಹೆಸರೊಂದಿಗೆ ಅನೇಕ ಅಶ್ಲೀಲವಾದ ಚಿತ್ರಗಳನ್ನು ಊರಿನ ಕಟ್ಟಡಗಳ ಮೇಲೆ, ಗೋಡೆಗಳ ಮೇಲೆಯು ಬರೆಯುತ್ತಾರೆ.

ಇದನ್ನೆಲ್ಲ ತಿಳಿದ ಅವಳ ತಾಯಿಯು ಸಹ ಇವಳ ಬಗ್ಗೆ ಅನುಮಾನ ಪಡುತ್ತಾಳೆ. ಅಲ್ಲದೆ ಅವಳ ತಂದೆ ಕುಡಿದು ಬಂದು ಅವಳ ತಾಯಿಯನ್ನು ಚೆನ್ನಾಗಿ ಹೊಡೆಯುತ್ತಾನೆ. ಅದಕ್ಕೆ ಕಾರಣ

ಅವಳ ಮಗಳೇ ಎಂದು ತಾಯಿಯು ಬಯ್ಯುತ್ತಾಳೆ. ಅವರು ಕೆಲಸಕ್ಕೆ ಹೋಗುತ್ತಿದ್ದ ಸ್ಥಳದಲ್ಲಿಯು ಅವರಿಗೆ ಕೆಲಸವಿಲ್ಲ ಎಂದು ತಿಳಿಸಿ ಕೆಲಸದಿಂದ ತೆಗೆದುಹಾಕುತ್ತಾರೆ. ಕೊನೆಗೆ ಎಲ್ಲರೂ ಇವರನ್ನು ನೋಡಿ ಕೇಕೆ ಹಾಕಿ ನಗುತ್ತಾ ಹಾಸ್ಯ ಮಾಡಲು ಪ್ರಾರಂಭಿಸುತ್ತಾರೆ.

ಒಂದು ದಿನ ಅವಳು ದಾರಿಯಲ್ಲಿ ಬರುವಾಗ ಊರಿನ ಜನರು ಬೆಂಕಿಯ ಪಂಜುಗಳನ್ನಿಡಿದು ಅವಳನ್ನು ಅಟ್ಟಿಸಿಕೊಂಡು ಹೋಗುತ್ತಿರುವಂತೆ ಭ್ರಮೆಯುಂಟಾಗುತ್ತದೆ. ಕೊನೆಗೆ ಅವಳು ಅವರ ಸ್ನೇಹಿತೆಯರೊಂದಿಗೆ ಮಾತನಾಡಿ ಒಂದು ನಿರ್ಧಾರಕ್ಕೆ ಬರುತ್ತಾಳೆ. ಅವರ ಊರಿನಲ್ಲಿ ದೀಪದ ಹಬ್ಬ ನಡೆಯುವ ದಿನದ ರಾತ್ರಿಯಲ್ಲಿ ಇಬ್ಬರು ಆತ್ಮಹತ್ಯೆ ಮಾಡಿಕೊಳ್ಳುವುದೆಂದು. ಸಮುದ್ರಕ್ಕೆ ಹಾರಿ ಪ್ರಾಣ ತ್ಯಜಿಸುತ್ತಾರೆ.

ಅವರು ಸತ್ತ ನಂತರ ರೌಡಿಯಂತೆ ವರ್ತಿಸುತ್ತಿದ್ದ ಅವನು ಕೊನೆಗೆ ಹೆಂಡತಿಯಿಂದ ಬಯ್ಗುಳ ತಿಂದು ಮನೆಯಿಂದ ಹೊರಬೀಳುತ್ತಾನೆ. ಅವನ ಬೆಂಬಲಿಗರಾಗಿದ್ದ ಸ್ನೇಹಿತರು ಅವನಿಂದ ದೂರವಾಗುತ್ತಾರೆ. ಅವನು ಕುಡಿಯುವ ಹೆಂಡ ರಕ್ತವಾಗಿ ಕಾಣತೊಡಗಿತು. ನೀರಿನಲ್ಲಿ ನಡೆಯುವಾಗ ಯಾರದೋ ಕೈಗಳು ಇವನನ್ನು ಎಳೆಯುವಂತೆ ಆಗುತ್ತಿತ್ತು. ಈ ರೀತಿ ಅವನು ಪಶ್ಚಾತ್ತಾಪದ ಬೇಗೆಯಲ್ಲಿ ಬೇಯತೊಡಗುತ್ತಾನೆ. ಹುಚ್ಚನಂತೆ ಓಡತೊಡಗುತ್ತಾನೆ ಆ ಮೂರು ಸ್ನೇಹಿತೆಯರು ಒಬ್ಬೊಬ್ಬರಾಗಿ ತಮ್ಮ ಪ್ರಾಣವನ್ನು ತ್ಯಜಿಸಿದ ನಂತರ ಆ ಊರಿನ ಎಲ್ಲಾ ಮಹಿಳೆಯರಿಗೂ ಧೈರ್ಯ ಬರುತ್ತದೆ. ಗರ್ವದಿಂದ ಮೆರೆಯುತ್ತಿದ್ದ ಗಂಡಸರು ತಮ್ಮ ತಪ್ಪನ್ನು ಅರಿತುಕೊಂಡರು. ಆದರೆ ಪ್ರಯೋಜನವೇನು? ಸತ್ತು ಮಣ್ಣಲ್ಲಿ ಮಣ್ಣಾದ ಆ ಮೂರು ಮುದ್ದು ಮುಖದ ಸ್ನೇಹಿತೆಯರನ್ನು ಬದುಕಿಸಲು ಸಾಧ್ಯವಾಯಿತೆ? ಖಂಡಿತ ಆಗಲಿಲ್ಲ.

ಅವರು ಬದುಕಿ ತಾವು ಹೋರಾಟ ನಡೆಸುತ್ತೇವೆ ಎಂದು ಧೈರ್ಯ ತಂದುಕೊಂಡಾಗ, ಎಲ್ಲಿ ಇತರ ಹೆಂಗಸರು ಇವರಂತೆಯೇ ಗಂಡುಬೀರಿಗಳಾಗಿ ಗಂಡಸರಿಗೆ ಕೊಡುವ ಗೌರವ ಮರ್ಯಾದೆ ಕಡಿಮೆಯಾಗುತ್ತದೆಯೇ ಎಂದು ಇಲ್ಲದ ಊಹಾಪೋಹಗಳನ್ನು ಹಬ್ಬಿಸಿ ಅವರಿಗೆ ಸಾವಿನ ದಾರಿಬಿಟ್ಟು ಇತರೇ ಯಾವುದೇ ದಾರಿಗಳಿಲ್ಲದಂತೆ ಮುಳ್ಳುಗಳನ್ನು ಚೆಲ್ಲಿಬಿಟ್ಟಿದ್ದರು.

ಈಗ ಆ ಊರಿನಲ್ಲಿ ಮಹಿಳೆಯರಿಗೆ ಗೌರವ, ಮರ್ಯಾದೆ ಸಿಕ್ಕಿದೆ. ಈ ರೀತಿ ಮಹಿಳೆಯರು ತಮ್ಮ ಹಕ್ಕನ್ನು ತಮ್ಮ ಸ್ಥಾನಮಾನವನ್ನು ಪಡೆಯಲು ಆ ಗೆಳತಿಯರ ಆಹುತಿ ಆಗಲೇ ಬೇಕಾಗಿತ್ತೇ? ❑

ಲಕ್ಷ್ಮಿ ಎ.

## ಪುರುಷ ಮತ್ತು ಪಿಸುಮಾತು

ಸಮುದ್ರ:
ಓಹ್! ನೀನೆಷ್ಟು ಅಗಾಧ
ನುಂಗಿರುವೆ ನೀನು
ಅಖಂಡ ಖಂಡಗಳನ್ನೇ
ಹೊತ್ತಿಟ್ಟುಕೊಂಡಿರುವೆ
ಅಗಾಧ ಪರುವತಗಳನ್ನೇ

ಎತ್ತೆತ್ತಲಿಂದ ತುಂಬಿ ಹರಿದ
ಸೀ ನೀರಿನ ನದಿಗಳನ್ನೆಲ್ಲ
ಉಪ್ಪು ನೀರಿನಲ್ಲಿ ಇಲ್ಲವಾಗಿಸಿರುವೆ
ಅತ್ಯಂತ ಬಲಶಾಲಿ ತಿಮಿಂಗಿಲಗಳು
ಅತಿ ಬೆಲೆಯುಳ್ಳ ಮುತ್ತು ರತ್ನಗಳು
ನಿನ್ನಾಶ್ರಯವನ್ನೇ ಪಡೆದಿವೆ

ಆಗಿ ಅಳಿದ ಐತಿಹ್ಯಗಳನ್ನೂ
ಆಳಿದ ರಾಜರ ಕೋಟೆಗಳನ್ನೂ
ಕಾಣದ ಪಾತಾಳಕ್ಕೆ ಕದ್ದೊಯ್ದಿರುವೆ.

ಅಂತರಂಗದಲ್ಲಿ ಏನೇನೆಲ್ಲ ಅಡಗಿಸಿಟ್ಟಿರುವೆ
ಬಯಲಲ್ಲಿ ಮಾತ್ರ ಬಿಟ್ಟಿರುವೆ
ಬೆಳ್ಳಗೆ ಮಿಂಚುವ ಬುರು ಬುರು ನೊರೆ

ವಾಹ್! ವಾಹ್! ನಿನಗ್ಯಾರೂ ಸಮರಿಲ್ಲ
ನಿನಗೆ ಶರಣು ಶರಣೆಂಬೆ.
ಆದರೂ ನನ್ನದೊಂದು ಪಿಸು ಮಾತಿದೆ.

ನನ್ನೂರ ಗುಡ್ಡದ ಕೆಳಗೆ
ತಣ್ಣನೆಯ ತೊರೆಯೊಂದು
ನನ್ನ ತಾತನ ಕಾಲದಿಂದಲೂ
ಹರಿಯುತ್ತಲೇ ಇದೆ
ವೈಯಾರದಿಂದ ನಿನ್ನ ಪರಿವೆಯಿಲ್ಲದೆ
ನಿನ್ನ ಪರಿಚಯವೂ ಇಲ್ಲದೆ!

ಚಿತ್ರಾ

# ಕತ್ತಲೆಯ ಹಾಡುಗಳು

ದಿನಾಂಕ 15-8-2001ರಂದು ಮಾನಸ ಬಳಗ ಹಾಗೂ ನರ್ಮಾದ ಸೌಹಾರ್ದ ವೇದಿಕೆಯವರು ಸೇರಿ ವಿಭಿನ್ನ ರೀತಿಯಲ್ಲಿ ಸ್ವಾತಂತ್ರ್ಯ ದಿನಾಚರಣೆಯನ್ನು ಆಚರಿಸಬೇಕೆಂದು ಸ್ವಾತಂತ್ರ್ಯದ ಹಾಡುಗಳ ಕಾರ್ಯಕ್ರಮವನ್ನು ನಡೆಸಿದರು. ಕಾರ್ಯಕ್ರಮದಲ್ಲಿ 20ಕ್ಕೂ ಹೆಚ್ಚಿನ ಸಂಘಟನೆಗಳು ಪಾಲ್ಗೊಂಡು ಕಾರ್ಯಕ್ರಮ ಯಶಸ್ವಿಗೊಳಿಸಿದರು.

ವಿವಿಧ ಹೋರಾಟದಲ್ಲಿ ಭಾಗಿಯಾಗಿರುವ ವಿಮೋಚನ, ಮಹಿಳಾ ಜಾಗೃತಿ, ಸಂವಾದ, ದುಡಿಯೋರ ಹೋರಾಟ, ಮಾನಸ, ದಲಿತ ಮಹಿಳಾ ಚಳುವಳಿ, ಸಂಗಮ, APSA, ಕನವು ಶಾಲೆ, ಸೀತಾಶಾಲೆ, ವಿಕಾಸನ ಶಾಲೆ ಪೆಡೆಸ್ಟ್ರಿಯನ್ ಪಿಕ್ಚರ್ಸ್, ನಾಗ ವಿದ್ಯಾರ್ಥಿಗಳು, ಟಿಬೇಟ್ ವಿದ್ಯಾರ್ಥಿಗಳ ಒಕ್ಕೂಟ ಇನ್ನೂ ಅನೇಕ ಗುಂಪುಗಳು, ವ್ಯಕ್ತಿಗಳು ಕಾರ್ಯಕ್ರಮದಲ್ಲಿ ಭಾಗವಹಿಸಿ ಹೋರಾಟದ ಹಾಡುಗಳನ್ನು ಹಾಡಿದರು. ಹಾಡುಗಳು ಪರಿಣಾಮಕಾರಿಯಾದ ರಾಜಕೀಯ ಹೇಳಿಕೆಗಳಾಗಬಹುದೆಂಬುದನ್ನು ಕಾರ್ಯಕ್ರಮ ಸಾಬೀತು ಪಡಿಸಿತು. ದಲಿತರ, ಮಹಿಳೆಯರ, ಮಕ್ಕಳ, ಆದಿವಾಸಿಗಳ, ಲೈಂಗಿಕ ಅಲ್ಪಸಂಖ್ಯಾತರ, ಕಾರ್ಮಿಕರ ಮತ್ತು ಇನ್ನಿತರ ಹೋರಾಟಗಳಲ್ಲಿ ತೊಡಗಿಕೊಂಡಿರುವ ಸಂಘಟನೆಗಳು ತಮ್ಮ ಹೋರಾಟಗಳ ಹಾಡನ್ನು ಹಾಡಿದ್ದು ಅರ್ಥಪೂರ್ಣವಾಗಿತ್ತು. ನಾಗಾ ಮತ್ತು ಟಿಬೇಟಿನ ವಿದ್ಯಾರ್ಥಿಗಳ ಹಾಡು, ನೃತ್ಯದ ಕಾರ್ಯಕ್ರಮಕ್ಕೆ ತಲೆ ತೂಗದವರಿರಲಿಲ್ಲ. ವೈನಾಡಿನ ಕನವು ಶಾಲೆಯ ಮಕ್ಕಳು ಹಾಡು, ಕುಣಿತದ ಮೂಲಕ ಇಡೀ ಸಭೆಗೆ ಚೈತನ್ಯ ತುಂಬಿದರು. 'ನಮ್ಮ ಮನೆ' ಶಾಲೆಯ ಮಕ್ಕಳು ಬಾಲಕಾರ್ಮಿಕರ ಕುರಿತು ಮನಮುಟ್ಟುವಂತೆ ಹಾಡಿದರು. ದಲಿತ ಮಹಿಳಾ ಚಳುವಳಿಯ ಸದಸ್ಯರು ದಲಿತರ ಹೋರಾಟ ಕುರಿತು ಕೆಚ್ಚಿನಿಂದ ಹಾಡಿದರು, ಸಂವಾದ ಗುಂಪಿನ ವಿದ್ಯಾರ್ಥಿಗಳು ಹಾಡಿದ ಡಾಟುಕಾಂ, ಪೆಪ್ಸಿಕೋಲ ಹಾಡಿನ ಮೂಲಕ ಜಾಗತೀಕರಣಕ್ಕೆ ಪೆಟ್ಟು ಕೊಟ್ಟರೆ, ಮಾನಸದ ಸದಸ್ಯೆಯರು, ಹೆಂಗಸರು, ಕಾಸು ಕಾಸು ಕೂಡಿಸಿ ಉಳಿತಾಯ ಮಾಡುವುದನ್ನು ಹಾಡಿನ ಮೂಲಕ ಹೇಳಿದರು. ಅಣುಬಾಂಬ್ ಕುರಿತು ಕಾಡುಗುಡಿಯ ಮಕ್ಕಳು "ಬೇಡ ಬೇಡ ಬುದ್ಧ ನೀನು ನಗಲೇ ಬೇಡ" ಎಂದು ಹಾಡಿದರು. ವಿಮೋಚನದ ಚಿತ್ರಾ ಹಕ್ಕಿಯಾಗಿ ಹಾಡಿದರೆ, ಪಿಚ್ಚಳ್ಳಿ ಶ್ರೀನಿವಾಸ್ ಮಾಯದಂತಾ ಮಳೆ ಬರಿಸಿದರು. ಹೆಸರು, ಬೀದಿ, ಊರಿನ ಹೆಸರು ಕೇಳದೆ ನಿರ್ನಾಮ ಮಾಡುವ ಅಣುಬಾಂಬ್ ಕುರಿತು ಕಮಾನ್ ಹಾಡಿದರು. ಕರಿಯರ ಹೋರಾಟ ಕುರಿತು ಗೇಲ್ ಹಾಡಿದರು. ಕಾರ್ಯಕ್ರಮದ ಕೊನೆಯಲ್ಲಿ ಸುಮತಿ ಹಾಡಿದರು. ಕನ್ನಡ, ತೆಲುಗು, ಮಲೆಯಾಳಂ, ಟಿಬೆಟ್, ನಾಗ, ಹಿಂದಿ, ಇಂಗ್ಲೀಷ್....ಭಾಷೆಗಳ ಭೇದವಿಲ್ಲದೆ ಹಾಡುಗಳು ಹೊರ ಹೊಮ್ಮಿದವು. ಹಾಡುಗಳೆ ಒಂದು ಭಾಷೆಯಾಗಿ ಎಲ್ಲರ ಮನದಲ್ಲೂ ಮೊಳಗಿತ್ತು. ಆ ಸಮಾರಂಭಕ್ಕೆಂದು ಪ್ರಕಟಿಸಿದ ಕರಪತ್ರವನ್ನು ಪ್ರಕಟಿಸಿದ್ದೇವೆ.

*ಕತ್ತಲೆಯ ಹಾಡುಗಳುಂಟು ಕಗ್ಗತ್ತಲಲಿ*
*ಬದುಕುತ್ತಿದ್ದೇವೆ ಕಗ್ಗತ್ತಲ ದಿನಗಳಲಿ* — *ಬರ್ಟೋಲ್ಟ್ ಬ್ರೆಕ್ಟ್*

ಶ್ರೀಮಂತರಿಗೆ ಸುಖದ ದಿನಗಳಿವು. ಅವರಿಗೆಲ್ಲ ಜಾಗತೀಕರಣ ವೆಂದರೆ ಹೈಟೆಕ್ ಉದ್ಯೋಗಗಳು ಕೊಳ್ಳಲುಂಟು ಝಗಮಗಿಸುವ ಕಾರುಗಳ ಸಾಲು, ತಿನ್ನಲುಂಟು ನ್ಯೂಜಿಲ್ಯಾಂಡಿನ ಸೇಬುಗಳು.

ಬಡವರಿಗೆ ಸಂಕಷ್ಟದ ದಿನಗಳಿವು. ಕಾರ್ಖಾನೆಗಳ ಬಾಗಿಲುಗಳು ಬಂದಾಗಿ ಕೆಲಸವಿಲ್ಲ, ಮಳೆ ಇಲ್ಲದೆ ಸಾಲದ ಉರುಳಿನಲಿ ರೈತಾಪಿ ಜನ ಮುಕ್ತಿಕಾಣುತ್ತಿದ್ದಾರೆ. ಹೈಟೆಕ್ ಹೆದ್ದಾರಿಗಳು, ಗಣಿಗಾರಿಕೆ, ದೊಡ್ಡ ಅಣೆಕಟ್ಟುಗಳು, ಇತರೆ ಬೃಹತ್ ಅಭಿವೃದ್ಧಿ ಯೋಜನೆಗಳಡಿ ಬಡವರು ಎತ್ತಂಗಡಿಯಾಗುತ್ತಿದ್ದಾರೆ. ನಗರದ ಸ್ಲಂಗಳಿಗೆ ದೂಡಲ್ಪಟ್ಟು, ಮೇಲ್‌ಸೇತುವೆಗಳನ್ನು ಕಟ್ಟುತ್ತಾ, ರಸ್ತೆ, ಕಛೇರಿ, ಬಂಗಲೆ, ತೋಟ್ಟಿಗಳನ್ನು ಶುಚಿಯಾಗಿಡುವ ಕೆಲಸ ಮಾಡುತ್ತಾ, ಅವಶ್ಯಕತೆ ಇಲ್ಲದಾಗ ನಗರದಿಂದ ಒದ್ದೋಡಿಸಲ್ಪಡುತ್ತಾರೆ. ಮಧ್ಯರಾತ್ರಿಯಲ್ಲಿ ಪಡೆದ ಸ್ವಾತಂತ್ರ್ಯಕ್ಕೆ 54 ವರ್ಷಗಳಾದರೂ ಜನರ ಬದುಕು ಬೆಳಕು ಕಂಡಿಲ್ಲ. ಇಂದು ಜಾಗತೀಕ ಯೋಜನೆಗಳಿಂದಾಗಿ ಬಹುರಾಷ್ಟ್ರೀಯ ಕಂಪೆನಿಗಳು ಇಲ್ಲಿ ಅಂಗಡಿ ತೆರೆದು ಲಾಭ ದೋಚುತ್ತಾರೆ. ನಮ್ಮ ದುಡಿಮೆ, ತೆರಿಗೆಯ ಮೇಲೆ ಲಾಭಕೋರರ ಸುಖದ ಸುಪ್ಪತ್ತಿಗೆಯ ಸಬ್ಸಿಡಿ ಬದುಕು!

ಭ್ರಷ್ಟ ರಾಜಕಾರಣಿಗಳು, ಹಗರಣದ ದೋಷ ಹೊತ್ತ ಸರ್ಕಾರ ಐಕ್ಯತೆಯ ಮೆಶಿನ್ ಗನ್ನಿನಲಿ ಕಾಶ್ಮೀರ, ಉತ್ತರಪೂರ್ವ ಪ್ರದೇಶಗಳ ಜನರ ದನಿಯನ್ನು ಹೊಸಕಿ ಹಾಕುತ್ತಿದೆ.

ಮಹಿಳೆಯರ ಮೇಲಿನ ಹಿಂಸೆ ತೀವ್ರ ರೂಪ ಪಡೆಯುತ್ತಿದೆ. ದಲಿತರ ಮಾರಣಹೋಮವಾಗುತ್ತಿದೆ. ಕೋಮುವಾದದ ಕಿಚ್ಚಿಗೆ ಮುಸ್ಲಿಂ ಕ್ರಿಶ್ಚಿಯನ್ನರು ಇತರ ಅಲ್ಪಸಂಖ್ಯಾತರು ಭೀತರಾಗಿದ್ದಾರೆ. ವಿನಾಶಕಾರಿ ಅಣ್ವಸ್ತ್ರಗಳೊಂದಿಗೆ ಕೇಂದ್ರ ಸರ್ಕಾರ ಆಟವಾಡುತ್ತಿದೆ.

ಲಾಭಕೋರರ ಹುಚ್ಚು ಓಟದಲ್ಲಿ ಪ್ರಕೃತಿ ಸಂಪನ್ಮೂಲಗಳು ಲೂಟಿ ಹೊಡೆಯಲ್ಪಟ್ಟು, ಇಡಿ ಜೀವಸಂಕುಲವೆ ಅಳಿವಿನಂಚಿನಲ್ಲಿದೆ. ಎಲ್ಲವನು ಕೂಡಿಸುವ ಜೀವಜಾಲದ ಕೊಂಡಿಯನ್ನು ಸರಿಪಡಿಸ ಲಾಗದಷ್ಟು ಹಾಳುಗೆಡವಲಾಗಿದೆ.

ಈ ಕತ್ತಲ ದಿನಗಳಲಿ ಸ್ವಾತಂತ್ರ್ಯದ ಹೋರಾಟ ಮುಂದು ವರೆಯಬೇಕು. ಹೋರಾಟದ ಬದುಕಿನಲಿ ಕತ್ತಲ ದಿನಗಳನ್ನೆ ಹಾಡಾಗಿಸೋಣ.

ದಿನಾಂಕ 15-8-2001ರ ಸ್ವಾತಂತ್ರ್ಯ ಹಾಡುಗಳ ಹಬ್ಬಕ್ಕೆ ಬನ್ನಿ, ವಿವಿಧ ಹೋರಾಟಗಳಲ್ಲಿ ತೊಡಗಿಕೊಂಡಿರುವ ಸಂಘಟನೆಗಳು, ವ್ಯಕ್ತಿಗಳು ಹಾಡಲಿದ್ದಾರೆ, ದುಡಿಯುವ ಜನರ, ಮಹಿಳೆಯರ ಆದಿವಾಸಿಗಳ, ದಲಿತರ, ಅಲ್ಪಸಂಖ್ಯಾತರ, ಲೈಂಗಿಕತೆ ಅಲ್ಪಸಂಖ್ಯಾತರ, ಹೋರಾಟದ, ಸಮಾನತೆಯ ಹಾಡುಗಳಿಗೆ ದನಿಗೂಡಿಸಲು ಬನ್ನಿ.

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 50 ರೂ.**

**ಸಂಸ್ಥೆಗಳಿಗೆ : 100 ರೂ.**

*ಸಂ. ಮಂಡಳಿ*

REGD No. CPMG/KA/BGE/289/2001

BOOK -POST
PRINTED MATTER

ವಿಳಾಸ :
**ಮಾನಸ**
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067